# ನಿಡುಗಲ್ಲು ಪರಿಸರದ ರಕ್ಷಣಾ ವಾಸ್ತುಶಿಲ್ಪ

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿರುವ ನಿಬಂಧ)


ಸಂಶೋಧಕ

ರವೀಶ್ ಜಿ.ಎಸ್.

ಮಾರ್ಗದರ್ಶಕರು

ಡಾ. ವಾಸುದೇವ ಬಡಿಗೇರ

ಸಹ ಪ್ರಾಧ್ಯಾಪಕರು





ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೯-೧೦

# ನಿಡುಗಲ್ಲು ಪರಿಸರದ ರಕ್ಷಣಾ ವಾಸ್ತುಶಿಲ್ಪ

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿರುವ ನಿಬಂಧ)



ಸಂಶೋಧಕ

ರವೀಶ್ ಜಿ.ಎನ್.

ಮಾರ್ಗದರ್ಶಕರು

ಡಾ. ವಾಸುದೇವ ಬಡಿಗೇರ

ಸಹ ಪ್ರಾಧ್ಯಾಪಕರು





ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೯-೧೦

# ಮಾರ್ಗದರ್ಶಕರ ಪ್ರಮಾಣ ಪತ್ರ

"ನಿಡುಗಲ್ಲು ಪರಿಸರದ ರಕ್ಷಣಾ ವಾಸ್ತುಶಿಲ್ಪ" ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ರವೀಶ್ ಜಿ.ಎನ್. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸಲಾಗಿದೆ.

ಸ್ಥಳ: ವಿದ್ಯಾರಣ್ಯ

ದಿನಾಂಕ: 14/09/2010

ಡಾ. ವಾಸುದೇವ ಬಡಿಗೇರ
ಸಹ ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ಸಂಶೋಧಕರ ಪ್ರಮಾಣ ಪತ್ರ

"ನಿಡುಗಲ್ಲು ಪರಿಸರದ ರಕ್ಷಣಾ ವಾಸ್ತುಶಿಲ್ಪ" ಎಂಬ ನಿಬಂಧವನ್ನು ಸಹ ಪ್ರಾಧ್ಯಾಪಕರಾದ ಡಾ. ವಾಸುದೇವ ಬಡಿಗೇರ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಸಮಾಜವಿಜ್ಞಾನಗಳ ನಿಕಾಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: 14/09/2010

Ravish G.N.

ರವೀಶ್ ಜಿ.ಎನ್.
ಸಂಶೋಧಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ಪರಿವಿಡಿ

# ಅಧ್ಯಾಯ – ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ವಿಧಾನ

## ೧. ಪ್ರಸ್ತಾವನೆ:

ಮಾನವನು ಭೂಮಿಯ ಮೇಲೆ ಕಾಣಿಸಿಕೊಂಡಾಗಿನಿಂದ ಹಿಡಿದು ಇಂದಿನವರೆಗೂ ತನ್ನನ್ನು ತಾನು ರಕ್ಷಿಸಿಕೊಳ್ಳಲು ವಿವಿಧ ರಕ್ಷಣಾ ತಂತ್ರಗಳನ್ನು ಕಂಡುಕೊಳ್ಳುತ್ತಾ ಬಂದಿದ್ದಾನೆ. ಆದರೆ ರಕ್ಷಣಾ ವಾಸ್ತುಶಿಲ್ಪ ಎಂಬುದು ಹೆಚ್ಚು ಬೆಳವಣಿಗೆ ಕಂಡಿದ್ದು, ರಾಜ್ಯಗಳ ಉಗಮವಾದ ನಂತರ ಎಂದು ಹೇಳಬಹುದಾಗಿದೆ. ರಾಜಕೀಯ ವಿಜ್ಞಾನ ಅಥವಾ ರಾಜನೀತಿ ಗ್ರಂಥಗಳಾದ **ಕೌಟಿಲ್ಯನ ಅರ್ಥಶಾಸ್ತ್ರ 'ಶುಕ್ರನೀತಿಶಾಸ್ತ್ರ'** ಕಾಮಂದಕನ ನೀತಿಸಾರ ಮುಂತಾದ ಪ್ರಾಚೀನ ಗ್ರಂಥಗಳಲ್ಲಿ ಕೋಟೆಗಳನ್ನು ಕಟ್ಟಲು ಅಥವಾ ನಗರಗಳನ್ನು ಭದ್ರಗೊಳಿಸಲು ಒತ್ತುಕೊಟ್ಟಿದ್ದಾರೆ. ರಾಜನು ತನ್ನನ್ನು ಮತ್ತು ತನ್ನ ಪರಿವಾರ ಹಾಗೂ ರಾಜ್ಯಸಂಪತ್ತನ್ನು, ರಕ್ಷಿಸಲು ಕೋಟೆಗಳನ್ನು ಕಟ್ಟಿಸುತ್ತಿದ್ದನು. ವಿವಿಧ ರಾಜವಂಶಗಳ ಸಂಘಟನೇಲ್ಲಿ ಕೋಟೆಗಳು ಅತಿ ಮುಖ್ಯವಾದ ಪಾತ್ರಗಳನ್ನು ವಹಿಸಿವೆ. ಅನೇಕ ಶ್ರೇಷ್ಠ ರಾಜವಂಶಗಳ ಉತ್ಥಾನ ಮತ್ತು ಪತನಗಳಿಗೆ ಮುಖ್ಯ ಕಾರಣ ಕೋಟೆಗಳನ್ನು ಸ್ವಾಧೀನಪಡಿಸಿಕೊಳ್ಳುವಿಕೆಯಾಗಿದೆ. ಆದ್ದರಿಂದ ಅನೇಕ ರಾಜವಂಶಸ್ಥರು ಕಾಲಕಾಲಕ್ಕೆ ರಕ್ಷಣಾ ತಂತ್ರಗಳಲ್ಲಾಗುವ ಬದಲಾವಣೆಗಳಿಗೆ ಅನುಗುಣವಾಗಿ ತಮ್ಮ ಭೌಗೋಳಿಕ ವ್ಯಾಪ್ತಿಯಲ್ಲಿ ವಿವಿಧ ಪ್ರಕಾರದ ಕೋಟೆಗಳನ್ನು ನಿರ್ಮಿಸುತ್ತಿದ್ದರು. ಇದೇ ಕಾರಣಕ್ಕಾಗಿಯೇ ಕೋಟೆ ಅಥವಾ ದುರ್ಗದ ನಿರ್ಮಾಣವು ರಕ್ಷಣೆಯ ದೃಷ್ಟಿಯಿಂದ ಅತ್ಯವಶ್ಯಕವಾಗಿತ್ತು. ವಾಸ್ತವವಾಗಿ ರಕ್ಷಣೆ ಎಂಬುದು ಕೋಟೆಗೆ ಸಂಬಂಧಿಸಿದ್ದಾಗಿದೆ. ಇದು ಪ್ರಾರಂಭದಲ್ಲಿ ಮಣ್ಣಿನ ದಿಬ್ಬಗಳು, ಬಿದಿರಿನ ತಡೆಗೋಡೆ, ಆಳವಾದ ಕಂದಕಗಳ ಮೂಲಕ ಆರಂಭವಾಗಿ ಕಾಲಕಾಲಕ್ಕೆ ರಕ್ಷಣಾ ವಿಧಾನಗಳಲ್ಲಾದ ಬದಲಾವಣೆಯಿಂದ ಕೋಟೆಯನ್ನು ಕಲ್ಲು, ಮಣ್ಣು, ಇಟ್ಟಿಗೆ, ಗಾರೆಯಿಂದ ನಿರ್ಮಿಸಲು ಪ್ರಾರಂಭಿಸಿದರು. ಈ ಅಂಶ ನಮಗೆ ಕೋಟೆಗಳ ಬಗ್ಗೆ ಅಧ್ಯಯನ ಕೈಗೊಂಡಾಗ ತಿಳಿದುಬರುತ್ತದೆ.

ಇಂದು ಇತಿಹಾಸ ಸಂಶೋಧನೇ ಹೊಸ ತಿರುವನ್ನು ಪಡೆದುಕೊಂಡಿದೆ. ಏಕೆಂದರೆ ಪುರಾತತ್ವಶಾಸ್ತ್ರ ವೈಜ್ಞಾನಿಕ ವಿಧಾನಗಳಿಂದ ಜಾಗತಿಕ ಮಟ್ಟದಲ್ಲಿ ಬೆಳೆಯುತ್ತಿರುವುದು ಅಲ್ಲದೆ, ಕೇವಲ ರಾಷ್ಟ್ರೀಯ ಇತಿಹಾಸದ ಕುರಿತಂತೆ ನಡೆಯುತ್ತಿದ್ದ ಸಂಶೋಧನೆಯು ಕೆಲವು ದಶಕಗಳಿಂದ ಸ್ಥಳೀಯ ಚರಿತ್ರೆ ಅಧ್ಯಯನಕ್ಕೆ ಹೆಚ್ಚು ಒತ್ತು ಕೊಡಲಾಗುತ್ತಿದೆ. ಅದರಲ್ಲೂ ಸ್ಥಳೀಯ ಚರಿತ್ರೆಗೆ ಸಂಬಂಧಿಸಿದ ಗ್ರಂಥಗಳು, ಲೇಖನಗಳು, ಪ್ರಬಂಧಗಳು ಇಂದು ಹೆಚ್ಚಿನ ಪ್ರಾಧಾನ್ಯತೆಯನ್ನು ಪಡೆಯುತ್ತಿವೆ. ಸ್ಥಳೀಯ ಚರಿತ್ರೆಯ ಬೆಳವಣಿಗೆಯಿಂದ ಇತಿಹಾಸಕ್ಕೆ ಒಂದು ಸ್ಪಷ್ಟ ರೂಪ ನೀಡಲು ಸಾಧ್ಯವಾಗುತ್ತಿದೆ. ಹಾಗಾಗಿ ಸ್ಥಳೀಯ ಇತಿಹಾಸದ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ ಮಗ್ಗಲುಗಳನ್ನು ಸಮಗ್ರವಾಗಿ ಅಧ್ಯಯನ ಮಾಡಿದಾಗ ಮಾತ್ರ ನಮ್ಮ ಇತಿಹಾಸ ಸ್ಪಷ್ಟವಾಗುತ್ತದೆ. ಈ ನಿಟ್ಟಿನಲ್ಲಿ ಕರ್ನಾಟಕದ ಜಿಲ್ಲೆ, ತಾಲ್ಲೂಕು, ಗ್ರಾಮ ಮಟ್ಟದಲ್ಲಿ ಸಂಶೋಧನೆಗಳು ನಡೆಯುತ್ತಿವೆ.

ಪ್ರಸ್ತುತ ಅಧ್ಯಯನವು **ನಿಡುಗಲ್ಲು ಪರಿಸರದ ರಕ್ಷಣಾ ವಾಸ್ತುಶಿಲ್ಪ** ಎಂಬ ಶೀರ್ಷಿಕೆಯನ್ನು ಹೊಂದಿದೆ. ಈ ಶಿರೋನಾಮೆಯಲ್ಲಿ ರಕ್ಷಣೆ, ವಾಸ್ತು, ಶಿಲ್ಪ ಎಂಬ ಮೂರು ಶಬ್ಧಗಳಿವೆ. ರಕ್ಷಣೆ ಎಂಬುದಕ್ಕೆ ಕಾಪಾಡುವುದು, ಕಾವಲು, ಸಂರಕ್ಷಣೆ ಎನ್ನುವ ಅರ್ಥಗಳಿವೆ. ವಾಸ್ತು ಎಂದರೆ ವಾಸಿಸಲು ಯೋಗ್ಯವಾದ ಭೂಮಿಯಲ್ಲಿ ಕ್ರಮಬದ್ಧವಾಗಿ ನಿರ್ಮಿಸುವ ಕಟ್ಟಡವೇ ವಾಸ್ತು. ಶಿಲ್ಪವೆಂದರೆ ಕಟ್ಟಡಗಳನ್ನು ಕಟ್ಟುವಿಕೆ, ಅದು ದೇವಾಲಯ ಆಗಿರಬಹುದು ಅಥವಾ ಕೋಟೆ ಕೊತ್ತಲಗಳಾಗಿರಬಹುದು. ಒಟ್ಟಿನಲ್ಲಿ ರಕ್ಷಣಾ ವಾಸ್ತುಶಿಲ್ಪ ಎಂದರೆ ರಾಜನು ತನ್ನನ್ನು ಮತ್ತು ತನ್ನ ಸಮುದಾಯ, ಸಂಪತ್ತನ್ನು ರಕ್ಷಿಸಿಕೊಳ್ಳಲು ಯೋಗ್ಯವಾದ ಪ್ರದೇಶದಲ್ಲಿ ನಿರ್ಮಿಸಿಕೊಂಡ ರಕ್ಷಣಾ ಕಟ್ಟಡವಾಗಿದೆ. ವಾಸ್ತುಶಿಲ್ಪ ಎಂದರೆ ಕೇವಲ ದೇವಾಲಯ ಮತ್ತು ಕಟ್ಟಡಗಳಲ್ಲ. ನಗರಯೋಜನೆ, ಕಾಲುವೆ, ರಸ್ತೆ, ಉದ್ಯಾನ, ಕೋಟೆ–ಕೊತ್ತಲ ಮೊದಲಾದ ನಿರ್ಮಿತಿಗಳೂ ವಾಸ್ತುಶಿಲ್ಪ ಪದದ ವ್ಯಾಪ್ತಿಯಲ್ಲಿ ಬರುತ್ತವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ **ನಿಡುಗಲ್ಲು ಪರಿಸರದ ರಕ್ಷಣಾ ವಾಸ್ತುಶಿಲ್ಪ** ಎಂಬ ಶೀರ್ಷಿಕೆಯಡಿ ಅಧ್ಯಯನ ಕೈಗೊಳ್ಳಲಾಗಿದೆ.

### ೧.೧. ಅಧ್ಯಯನದ ಉದ್ದೇಶ

ರಾಜ್ಯಗಳ ಉಗಮದ ನಂತರ ರಾಜನು ತನ್ನ ಪರಿವಾರ ಮತ್ತು ರಾಜ್ಯದ ರಕ್ಷಣೆಗಾಗಿ ವಿವಿಧ ರಕ್ಷಣಾ ವಿಧಾನಗಳನ್ನು ಅಳವಡಿಸಿಕೊಂಡನು. ಅವುಗಳಲ್ಲಿ ಕೋಟೆಗಳ ನಿರ್ಮಾಣವು ಒಂದಾಗಿದೆ. ವಿಶಾಲ ಸಾಮ್ರಾಜ್ಯ ಕಟ್ಟುವಲ್ಲಿ ಪ್ರಮುಖ ಪಾತ್ರವಹಿಸಿದ್ದ ಕೋಟೆಗಳು ರಾಜ್ಯದ ಅವಿಭಾಜ್ಯ ಅಂಗಗಳಾಗಿದ್ದವು. ಜೊತೆಗೆ ನಮ್ಮ ನಾಡು, ನುಡಿ, ಸಂಸ್ಕೃತಿಯನ್ನು ರಕ್ಷಿಸಿದವಲ್ಲದೆ, ಇತಿಹಾಸ ರಚನೆಗೆ ಪ್ರಮುಖ ಪುರಾತತ್ವ ಆಕರಗಳಾಗಿವೆ. ಇಂತಹ ಕೋಟೆ–ಕೊತ್ತಲಗಳು ಪ್ರಾಚೀನ ಸ್ಮಾರಕಗಳಾಗಿ ವಿನಾಶದ ಅಂಚನ್ನು ತಲುಪುತ್ತಿವೆ. ಆಧುನಿಕತೆ ಬೆಳೆದಂತೆಲ್ಲಾ ಯುದ್ಧ

ತಂತ್ರಗಳಲ್ಲಾದ ವೈಜ್ಞಾನಿಕ ವಿಧಾನಗಳ ಅಳವಡಿಕೆಯಿಂದ ಕೋಟೆಗಳು ಮಹತ್ವ ಕಳೆದುಕೊಂಡು, ಪ್ರಕೃತಿ ವಿಕೋಪ ಹಾಗೂ ಮನುಷ್ಯನ ಸ್ವಾರ್ಥಕ್ಕೆ ಸಿಲುಕಿ ಕಣ್ಮರೆಯಾಗುತ್ತಿವೆ. ಇಂತಹ ಅಪೂರ್ವ ಸ್ಮಾರಕಗಳ ಹಿಂದೆ ಅದೆಷ್ಟೋ ಇತಿಹಾಸ ಅಡಗಿದೆ. ನಿಡುಗಲ್ಲು ಪರಿಸರದ ಇಂತಹ ಏಳುಬೀಳಿನ ಇತಿಹಾಸವನ್ನು ವಿವಿಧ ಮಗ್ಗಲುಗಳಿಂದ ಪ್ರಸ್ತುತ ಅಧ್ಯಯನದಲ್ಲಿ ಕೈಗೊಳ್ಳಲಾಗುತ್ತಿದೆ. ಇವು ಸಂಪೂರ್ಣವಾಗಿ ನಾಶವಾಗುವ ಮುನ್ನ ದಾಖಲಿಸಿ ಮುಂದಿನ ಜನಾಂಗಕ್ಕೆ ಮಾದರಿಯಾಗಿಸುವ ಸಂಕ್ಷಿಪ್ತ ಪ್ರಯತ್ನವನ್ನು ಪ್ರಸ್ತುತ ಅಧ್ಯಯನ ಹೊಂದಿದೆ.

ನಿಡುಗಲ್ಲು ಎಂದಾಗ ಸಾಮಾನ್ಯವಾಗಿ ನಮಗೆ ನೆನಪಿಗೆ ಬರುವುದು ದೈತ್ಯಾಕಾರದ ಗಿರಿದುರ್ಗ. ಇದು ಏಳುಸುತ್ತಿನ ಕೋಟೆಯಾಗಿದ್ದು, ಕರ್ನಾಟಕದಲ್ಲಿ ಅತ್ಯಂತ ವಿಶಾಲವಾದ ಕೋಟೆಗಳಲ್ಲಿ ಒಂದಾಗಿದೆ. ರಚನೆ, ವಿನ್ಯಾಸ, ತಂತ್ರಗಾರಿಕೆಯನ್ನು ಹೋಲುವ ಹಾಗೂ ಮಾರ್ಪಾಡಾಗಿರುವ ಕೋಟೆಗಳು ನಿಡುಗಲ್ಲು ಪರಿಸರದಲ್ಲಿವೆ. ನಿಡುಗಲ್ಲು ಕೋಟೆಯ ಬಗ್ಗೆ ಈಗಾಗಲೇ ವಿದ್ವಾಂಸರಿಂದ ಅನೇಕ ಸಂಶೋಧನ ಲೇಖನ ಪರಿಚಯಾತ್ಮಕ ಕೃತಿ ಮಾರ್ಗದರ್ಶಿ ಗ್ರಂಥಗಳು ಹೊರಬಂದಿವೆಯಾದರೂ ರಕ್ಷಣಾ ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ಅಧ್ಯಯನಗಳು ಆಗಿಲ್ಲ. ಉದಾ: ದೇವರಬೆಟ್ಟ, ವೈ.ಎನ್. ಹೊಸಕೇಟೆ, ಬಂಗಾರನಾಯಕನ ಬೆಟ್ಟ, ಕನ್ನಮೇಡಿ ಮೊದಲಾದ ನಿಡುಗಲ್ಲು ಪರಿಸರದ ಕೋಟೆಗಳನ್ನು ಒಂದೆಡೆ ತಂದು ಅಧ್ಯಯನ ಮಾಡುವುದು ಪ್ರಸ್ತುತ ಸಂಶೋಧನೇ ಉದ್ದೇಶವಾಗಿದೆ.

ನಿಡುಗಲ್ಲು ಪರಿಸರವನ್ನು ಗಂಗರು, ಪೂರ್ವ ಚಾಲುಕ್ಯರು, ನೊಳಂಬ ಪಲ್ಲವರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ನಿಡುಗಲ್ಲು ಚೋಳರು, ವಿಜಯನಗರ, ನಿಡುಗಲ್ಲು ಪಾಳೆಯಗಾರರು, ಹರತಿ ಪಾಳೆಯಗಾರರು, ಹೊಸಕೋಟೆ ಪಾಳೆಯಗಾರರು, ಬಂಗಾರನಾಯಕನ ವಂಶಸ್ಥರು, ಕನ್ನಮೇಡಿ ಪಾಳೆಯಗಾರರು, ಹೈದರ್–ಟಿಪ್ಪು, ಮೈಸೂರಿನ ಒಡೆಯರು ತಮ್ಮ ಅಧೀನಕ್ಕೆ ಒಳಪಡಿಸಿಕೊಂಡು ಆಳ್ವಿಕೆ ನಡೆಸಿದರು. ಕೋಟೆಯ ನಿರ್ಮಾಣ ಕಾರ್ಯ ನಿಡುಗಲ್ಲು ಚೋಳರಿಂದ ಆರಂಭವಾಗಿ ಹರತಿ ಪಾಳೆಯಗಾರರವರೆಗೂ ಬೆಳವಣಿಗೆ ಹೊಂದಿರುವು ಅಧ್ಯಯನದಿಂದಬೆಳಕಿಗೆ ಬಂದಿದೆ.

ಪ್ರಸ್ತುತ ಅಧ್ಯಯನವು ಸಂಪೂರ್ಣ ಕ್ಷೇತ್ರ ಕಾರ್ಯಾಧಾರಿತವಾಗಿದೆ. ನಿಡುಗಲ್ಲು ಪರಿಸರದಲ್ಲಿ ಬರುವ ಐದು ಗಿರಿದುರ್ಗಗಳ ಕೋಟೆ–ಕೊತ್ತಲಗಳನ್ನು ಆಯಾಯಾ ಮಗ್ಗಲುಗಳಲ್ಲಿ ಅಭ್ಯಸಿಸುವ ಮೂಲಕ ಪ್ರತಿಯೊಂದು ಕೋಟೆಯನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡಲಾಗಿದೆ. ಈ ಭಾಗದಲ್ಲಿ ಆಳ್ವಿಕೆ ಮಾಡಿದ ಪಾಳೆಯಗಾರರು ತಮ್ಮ ಆರ್ಥಿಕ ಶಕ್ತಿಯ ಇತಿಮಿತಿಯಲ್ಲಿ ಸ್ಥಳೀಯ ಸಂಪನ್ಮೂಲಗಳನ್ನು ಬಳಸಿಕೊಂಡು, ಸಂಸ್ಥಾನದ ರಕ್ಷಣೆಗಾಗಿ ಮಾಡಿಕೊಂಡ ಕೋಟೆ–

ಕೊತ್ತಲಗಳನ್ನು ಕಾಲಮಾನದ ಚೌಕಟ್ಟಿನಲ್ಲಿ ತಂದು ಕೋಟೆಯ ರಚನೆ, ವಿನ್ಯಾಸ, ಉದ್ದೇಶ, ತಂತ್ರಗಾರಿಕೆ, ಕೋಟೆಯ ಸ್ಥಿತಿಗತಿಯ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಜೊತೆಗೆ ರಕ್ಷಣಾ ವ್ಯವಸ್ಥೆಗೆ ಪೂರಕವಾದ ಬುರುಜು, ಕಾವಲುಗೋಪುರ, ದೇವಾಲಯ, ಉಗ್ರಾಣ, ನೀರಿನ ಆಶ್ರಯ, ಮದ್ದಿನಮನೆ, ದ್ವಾರಬಾಗಿಲು, ವಸತಿನೆಲೆ, ಕಂದಕ, ಫಿರಂಗಿ, ರಹಸ್ಯ ಸುರಂಗಮಾರ್ಗಗಳು, ತುಪ್ಪದ ಕಣಜಗಳು, ಗರಡಿಮನೆ, ಉಗ್ರಾಣಗಳನ್ನು ವಿವಿಧ ದೃಷ್ಟಿಕೋನಗಳಿಂದ ಅಧ್ಯಯನ ಮಾಡುವ ಮೂಲಕ ಸ್ಥಳೀಯ ಚರಿತ್ರೆಯನ್ನು ಕಟ್ಟಿಕೊಡಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

### ೧.೨. ಅಧ್ಯಯನದ ವ್ಯಾಪ್ತಿ:

ಸಾಮಾನ್ಯವಾಗಿ ಯಾವುದೇ ಒಂದು ಸಂಶೋಧನೆ ಸ್ಪಷ್ಟವಾಗಿ ಯಶಸ್ಸು ಕಾಣಬೇಕಾದರೆ ಅದಕ್ಕೆ ಒಂದು ನಿರ್ದಿಷ್ಟ ಚೌಕಟ್ಟು ಅಗತ್ಯ ಅಂದರೆ ವ್ಯಾಪ್ತಿ ಇರುವುದು ಬಹುಮುಖ್ಯ ವ್ಯಾಪ್ತಿಗಳಿಲ್ಲದ ಅಧ್ಯಯನವು ಗೊಂದಲಮಯವಾಗಿ ಸಂಶೋಧನ ಮಿತಿಯನ್ನು ತೀವ್ರಗೊಳಿಸುವುದಲ್ಲದೆ, ಸಂಶೋಧನೇನ್ನು ದಾರಿ ತಪ್ಪಿಸುತ್ತದೆ. ಅಲ್ಲದೆ ಸಂಶೋಧನೆಉ ಪರಿಪಕ್ವವಾಗಲು ಸಾಧ್ಯವಿಲ್ಲ. ಪ್ರಸ್ತುತ ಅಧ್ಯಯನದ ಶೀರ್ಷಿಕೆಯನ್ವಯ ನಿಡುಗಲ್ಲು ಪರಿಸರಕ್ಕೆ ಮಾತ್ರ ಸೀಮಿತಗೊಳಿಸಲಾಗಿದೆ. ಪಾಳೆಯಗಾರರ ಕಾಲದಲ್ಲಿ ನಿರ್ಮಾಣವಾದ ಕೋಟೆಗಳು ಈ ಪರಿಸರದಲ್ಲಿ ಹಲವಿದ್ದು, ಇವುಗಳನ್ನು ಕಾಲಮಾನದ ಚೌಕಟ್ಟಿನಲ್ಲಿ ಸಾಂದರ್ಭಿಕವಾಗಿ ಆಯಾಯ ವಿಷಯಗಳಿಗನುಗುಣವಾಗಿ ಬಳಸಿಕೊಳ್ಳಲಾಗಿದೆ.

ಒಟ್ಟಾರೆ **ನಿಡುಗಲ್ಲು ಪರಿಸರದ ರಕ್ಷಣಾ ವಾಸ್ತುಶಿಲ್ಪ** ಎಂಬ ಪ್ರಸ್ತುತ ಅಧ್ಯಯನದಲ್ಲಿ ಪಾವಗಡ ತಾಲ್ಲೂಕಿನ ಮೂರು ಮಂಡಲ ಪಂಚಾಯ್ತಿಗಳಾದ ಮಂಗಳವಾಡ, ಚನ್ನಕೇಶವಪುರ, ವೈ.ಎನ್.ಹೊಸಕೋಟೆಯಲ್ಲಿ ಬರುವ ಪ್ರಮುಖವಾದ ನಿಡುಗಲ್ಲು, ದೇವರಬೆಟ್ಟ, ಯಲ್ಲಪ್ಪನಾಯಕನ ಬೆಟ್ಟ, ಬಂಗಾರನಾಯಕನ ಬೆಟ್ಟ, ಕನ್ನಮೇಡಿ ಕೋಟೆಗಳು ಈ ವ್ಯಾಪ್ತಿಯಲ್ಲಿ ಬರುತ್ತವೆ. ಜೊತೆಗೆ ಈ ಪ್ರದೇಶದಲ್ಲಿ ಮೊದಲ ಬಾರಿಗೆ ಆಳ್ವಿಕೆ ನಡೆಸಿದ ಗಂಗರಿಂದ ಹಿಡಿದು ಸ್ವಾತಂತ್ರ್ಯ ಚಳುವಳಿಯವರೆಗೂ ಅಧ್ಯಯನ ಕೈಗೊಳ್ಳಲಾಗಿದೆ.

### ೧.೩. ಅಧ್ಯಯನದ ಸ್ವರೂಪ:

ಈ ಸಂಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಆರು ಅಧ್ಯಾಯಗಳನ್ನಾಗಿ ವಿಭಾಗಿಸಲಾಗಿದೆ. ಈ ಅಧ್ಯಯನಗಳಲ್ಲಿ ಉಪಶೀರ್ಷಿಕೆಗಳೂ ಇವೆ. ಪ್ರಸ್ತುತ ಅಧ್ಯಯನವು ನಿಡುಗಲ್ಲು ಪರಿಸರದ ರಕ್ಷಣಾ ವಾಸ್ತುಶಿಲ್ಪಗಳನ್ನು ಕುರಿತದ್ದಾಗಿದೆ. ಈ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಪ್ರಥಮ ಅಧ್ಯಯನದಲ್ಲಿ ಸ್ಪಷ್ಟಪಡಿಸಲಾಗಿದೆ. ಪ್ರಸ್ತುತ ಅಧ್ಯಯನದ ಮಹತ್ವ, ಸ್ವರೂಪ ಹಾಗೂ ಅಧ್ಯಯನದ ವಿಧಿವಿಧಾನಗಳನ್ನು ಚರ್ಚಿಸಲಾಗಿದೆ.

ನಿಡುಗಲ್ಲು ದುರ್ಗವು ಕರ್ನಾಟಕದ ಗಡಿ ಪ್ರದೇಶದಲ್ಲಿದ್ದು, ಆಂಧ್ರಪ್ರದೇಶದ ಗಡಿಯಿಂದ ಸುತ್ತುವರೆದಿದೆ. ಇಲ್ಲಿ ಕರ್ನಾಟಕ ಮತ್ತು ಆಂಧ್ರದ ಸಂಸ್ಕೃತಿಗಳು ಸಮ್ಮಿಲನವಾಗಿವೆ. ಇದು ಪ್ರಾಚೀನ ಕಾಲದಿಂದಲೂ ಜನವಸತಿಯ ಪ್ರದೇಶವಾಗಿದ್ದು, ಆಧುನಿಕ ಕಾಲದವರೆಗೂ ತನ್ನದೇ ಆದ ಚಾರಿತ್ರಿಕ ಘಟ್ಟಗಳನ್ನು ಗುರುತಿಸಿಕೊಂಡಿದೆ. ಒಂದು ಕಾಲದಲ್ಲಿ ಸಿರಿ ಸಂಪತ್ತಿನಿಂದ ತುಂಬಿ ತುಳುಕುತ್ತಿದ್ದ ಕಾಳಾಂಜನಗಿರಿ, ಕಾಳಾಂಜನಾದ್ರಿ, ನೀಲಾವತಿ ಪಟ್ಟಣ ಎಂದೆಲ್ಲಾ ಕರೆಸಿಕೊಳ್ಳುತ್ತಿದ್ದ ನಿಡುಗಲ್ಲು ಇಂದು ಹಾಳು ಕೊಂಪೆಯಾಗಿದೆ. ನಿಡುಗಲ್ಲು ಪರಿಸರವನ್ನು ಆಳ್ವಿಕೆ ಮಾಡಿದ ಗಂಗರಿಂದ ಹಿಡಿದು ಸ್ವಾತಂತ್ರ್ಯ ಚಳುವಳಿಯವರೆಗೆ ರಾಜಕೀಯ ಚರಿತ್ರೆಯನ್ನು ಸ್ಥೂಲವಾಗಿ ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ಜೊತೆಗೆ ಪ್ರಸ್ತುತ ಅಧ್ಯಯನದಲ್ಲಿ ಇತ್ತೀಚೆಗೆ ದೊರೆತ ಶಾಸನಗಳು, ನನ್ನ ಕ್ಷೇತ್ರಕಾರ್ಯದ ಸಮಯದಲ್ಲಿ ಮತ್ತು ವಿದ್ವಾಂಸರು ಪತ್ತೆ ಹಚ್ಚಿದ ಪುರಾತತ್ವ ನೆಲೆಗಳು ಮೊದಲಾದ ವಿಷಯಗಳನ್ನು ಎರಡನೇ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಈ ಚರಿತ್ರೆಯನ್ನು ರಚಿಸಲು ಮುಖ್ಯವಾಗಿ ಕರ್ನಾಟಕದ ಅರಸು ಮನೆತನಗಳು, ಇತಿಹಾಸದರ್ಶನಗಳು, ಕರ್ನಾಟಕದ ಗೆಜೆಟೀಯರ್, ಎಪಿಗ್ರಾಫಿಯ ಕರ್ನಾಟಕ ಭಾಗ-೧೨ ಮತ್ತು ೧೬ ಮೊದಲಾದವುಗಳನ್ನು ವಿಶೇಷವಾಗಿ ಬಳಸಿಕೊಳ್ಳಲಾಗಿದೆ.

ಮೂರನೇ ಅಧ್ಯಾಯವು ರಕ್ಷಣಾ ವಾಸ್ತುಶಿಲ್ಪದ ಸಮಗ್ರ ಪಕ್ಷಿ ನೋಟವಾಗಿದೆ. ರಕ್ಷಣಾ ವಾಸ್ತುಶಿಲ್ಪದ ಅರ್ಥ ಮತ್ತು ವ್ಯಾಖ್ಯಾನಗಳನ್ನು ಇಲ್ಲಿ ವಿಶೇಷವಾಗಿ ವಿವರಿಸಲಾಗಿದೆ. ಕೋಟೆಗಳ ಉಗಮ ಮತ್ತು ವಿವಿಧ ಮಟ್ಟದಲ್ಲಿ ಬೆಳೆದುಬಂದ ಹಾದಿಯನ್ನು ಪ್ರಾಕೃತಿಕ ಪರಿಸರವನ್ನು ಮುಖ್ಯವಾಗಿ ಗಣನೆಗೆ ತೆಗೆದುಕೊಂಡು ಗುರುತಿಸಲಾಗಿದೆ. ಪ್ರಕೃತಿಯು ಕೋಟೆಯ ನಿರ್ಮಾಣದಲ್ಲಿ ಯಾವ ರೀತಿ ಸಹಕಾರಿಯಾಗಿತ್ತು ಎಂಬುದನ್ನು ಸಾಂದರ್ಭಿಕವಾಗಿ ಹೇಳಲು ಪ್ರಯತ್ನಿಸಲಾಗಿದೆ. ಜೊತಗೆ ನಿಡುಗಲ್ಲು ಪರಿಸರದ ಕೋಟೆಗಳ ಪ್ರಾಚೀನತೆ, ರಚನೆ, ವಿನ್ಯಾಸ, ತಂತ್ರಗಾರಿಕೆಯನ್ನು ಕುರಿತು ವಿಶ್ಲೇಷಿಸಲಾಗಿದೆ.

ವಾಸ್ತವವಾಗಿ ಕೋಟೆಗಳನ್ನು ನಿರ್ಮಾಣ ಮಾಡಿದುದರ ಹಿನ್ನೆಲೆ ಅವುಗಳ ಮಹತ್ವವನ್ನು ಸಮಕಾಲೀನ ಕೋಟೆಗಳ ಸಹಾಯದಿಂದ ವಿವೇಚಿಸಲಾಗಿದೆ. ಕೋಟೆಯ ಪ್ರಕಾರಗಳ ಬಗ್ಗೆಯೂ ವಿಶ್ಲೇಷಿಸಲಾಗಿದೆ. ಶಿಲ್ಪಶಾಸ್ತ್ರಗಳು ಪ್ರತಿಪಾದಿಸುವಂತೆ ವಾಸ್ತುಶಿಲ್ಪದ ಲಕ್ಷಣಗಳಾದ ಬುರುಜು, ಕಂದಕ, ಪ್ರಾಕಾರ, ಕೋಟೆಯ ತೆನೆ, ಅಂಬುಗಂಡಿ, ದ್ವಾರಬಾಗಿಲು, ಮುಗಿಲಟ್ಟಣೆ, ಫಿರಂಗಿ ಮುಂತಾದ ಸ್ಮಾರಕಗಳ ಬಗ್ಗೆ ವಿವರಣೆ ನೀಡಲಾಗಿದೆ. ಇವುಗಳನ್ನು ರಕ್ಷಣೆಗಾಗಿ ನಿರ್ಮಿಸಿದ ವಿಧಾನ, ಬಳಸಿಕೊಂಡ ಬಗೆ ಇವುಗಳ ಮಹತ್ವ, ಪ್ರಕಾರ ಮತ್ತಿತರ ವಿಷಯಗಳ ಮಾಹಿತಿಯನ್ನು ಸಂಗ್ರಹಿಸಿ ವಿವರಿಸಲಾಗಿದೆ.

ನಾಲ್ಕನೇ ಅಧ್ಯಾಯವು ನಿಡುಗಲ್ಲು ಪರಿಸರದಲ್ಲಿ ಕಂಡುಬರುವ ಪ್ರಮುಖ ಐದು ಕೋಟೆಗಳನ್ನು ಕಾಲಾನುಕ್ರಮದಲ್ಲಿ ವಿಶ್ಲೇಷಿಸಲಾಗಿದೆ. ಕೋಟೆಯ ಚರಿತ್ರೆ, ಕಾಲಮಾನ, ನಿರ್ಮಾಣದ ಉದ್ದೇಶ, ಮಹತ್ವ, ವಾಸ್ತುವಿನ್ಯಾಸ, ಲಕ್ಷಣಗಳು, ಮತ್ತಿತರೆ ವಿಷಯಗಳನ್ನು ಕ್ಷೇತ್ರ ಕಾರ್ಯಾಧಾರಿತ ಹಿನ್ನೆಲೆಯಲ್ಲಿ ವಿವರಿಸಲಾಗಿದೆ. ಜೊತೆಗೆ ರಕ್ಷಣಾ ವಾಸ್ತುಶಿಲ್ಪದ ಅಂಗಭಾಗಗಳನ್ನು ಸಾಮಾನ್ಯ ದೃಷ್ಟಿಯಲ್ಲಿ ಮೂರನೇ ಅಧ್ಯಾಯದಲ್ಲಿ ಹೇಳಲಾಗಿದೆ.

ಐದನೇ ಅಧ್ಯಾಯದಲ್ಲಿ ನಿಡುಗಲ್ಲು ಪರಿಸರದ ಕೋಟೆಗಳಿಗೆ ಸಂಬಂಧಿಸಿದ ಸ್ಮಾರಕಗಳನ್ನು ಪ್ರತ್ಯೇಕವಾಗಿ ಚರ್ಚಿಸಲಾಗಿದೆ. ಬುರುಜು, ಕಂದಕ, ದ್ವಾರಬಾಗಿಲು, ಕಾವಲುಗೋಪುರ, ನೀರಿನ ಆಶ್ರಯತಾಣ, ಗರಡಿಮನೆ, ಮದ್ದಿನಮನೆ, ಕಣಜ, ಫಿರಂಗಿ, ಉಬ್ಬುಶಿಲ್ಪಗಳು, ಅರಮನೆಗಳು, ತುಪ್ಪದ ಕಣಜ, ದೇವಾಲಯಗಳು ಮುಂತಾದ ಸ್ಮಾರಕಗಳ ಬಗ್ಗೆ ವಿವರಣೆ ನೀಡಲಾಗಿದೆ. ಇವುಗಳ ಬಳಕೆ, ರಚನೆ, ವಿನ್ಯಾಸ, ಮಹತ್ವ ಹೀಗೆ ವಿವಿಧ ದೃಷ್ಟಿಕೋನಗಳಿಂದ ಅಧ್ಯಯನ ಮಾಡಲಾಗಿದೆ.

ಕೊನೆಯ ಅಧ್ಯಾಯವು ಸಮಾರೋಪವಾಗಿದ್ದು, ಇದು ಇಡೀ ಅಧ್ಯಯನದ ಸಂಕ್ಷಿಪ್ತರೂಪ. ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಂಡ ಪ್ರಮುಖ ಸಂಗತಿಗಳ ಸಮೀಕ್ಷೆಯಾಗಿದೆ. ಅಧ್ಯಯನಕ್ಕೆ ಪೂರಕವಾಗಿ ಕೋಟೆಗಳ ನಕ್ಷೆ, ಛಾಯಾಚಿತ್ರ, ಪದಕೋಶಗಳನ್ನು ಅನುಬಂಧದಲ್ಲಿ ಕೊಡಲಾಗಿದೆ.

### ೧.೪. ಅಧ್ಯಯನದ ವಿಧಾನ:

ಸಂಶೋಧನೇನ್ನು ಸುಸೂತ್ರವಾಗಿ ನಡೆಸಲು ಅಧ್ಯಯನ ಕ್ರಮ ಅತಿಮುಖ್ಯ. ಆದ ಕಾರಣ ಸಂಶೋಧನೆಗೆ ಹೊರಡುವ ಮುನ್ನ ಉಪಯುಕ್ತ ಹಾಗೂ ಕ್ರಮಬದ್ಧವಾದ ಅಧ್ಯಯನ ಕ್ರಮವನ್ನು ರೂಪಿಸಿಕೊಳ್ಳಬೇಕು. ಜೊತೆಗೆ ಅಧ್ಯಯನ ಕೈಗೊಳ್ಳುವ ಮುನ್ನ ನಿಡುಗಲ್ಲು ಪರಿಸರಕ್ಕೆ ಸಂಬಂಧಿಸಿದಂತೆ ನಡೆದಿರುವ ಸಂಶೋಧನೆಗಳ ಪಟ್ಟಿಯನ್ನು ಮಾಡಿ ವಿವಿಧ ವಿದ್ವಾಂಸರೊಂದಿಗೆ ಚರ್ಚಿಸಿ ಪ್ರಸ್ತುತ ವಿಷಯವನ್ನು ತೆಗೆದುಕೊಳ್ಳಲಾಯಿತು. ವಿಷಯದ ಆಯ್ಕೆಯಾದ ನಂತರ ನಿಡುಗಲ್ಲು ಪರಿಸರದ ರಕ್ಷಣಾ ವಾಸ್ತುಶಿಲ್ಪ ಎಂಬ ಶೀರ್ಷಿಕೆಯಲ್ಲಿ ಯಾವ ಯಾವ ಅಂಶಗಳ ಒಳಗೊಂಡಿರಬೇಕೆಂಬ ಪಟ್ಟಿಯನ್ನು ತಯಾರಿಸಲಾಯಿತು. ನಂತರ ಕರ್ನಾಟಕ ಮತ್ತು ನಿಡುಗಲ್ಲು ಪರಿಸರದ ಕೋಟೆಗಳ ಬಗ್ಗೆ ನಡೆದಿರುವ ಅಧ್ಯಯನಗಳನ್ನು ತಿಳಿಯಲು ವಿವಿಧ ವಿಶ್ವವಿದ್ಯಾಲಯಗಳಿಗೆ ಭೇಟಿ ನೀಡಲಾಯಿತು. ಹೊರ ರಾಜ್ಯಗಳ ವಿಶ್ವವಿದ್ಯಾಲಯ ಮತ್ತಿತರ ಗ್ರಂಥಾಲಯಗಳಿಗೆ ಭೇಟಿ ನೀಡಿ ರಕ್ಷಣಾ ವಾಸ್ತುಶಿಲ್ಪದ ಬಗ್ಗೆ ನಡೆದಿರುವ ಅಧ್ಯಯನಗಳು ಮತ್ತು ಅಧ್ಯಯನದ ಯೋಗ್ಯ ಅಂಶಗಳನ್ನು ಕಾಲಾನುಕ್ರಮವಾಗಿ ದಾಖಲಿಸಿಕೊಳ್ಳಲಾಯಿತು. ಧಾರವಾಡ ವಿಶ್ವವಿದ್ಯಾಲಯದಲ್ಲಿ ನಿಡುಗಲ್ಲು ಚೋಳರು ಒಂದು ಅಧ್ಯಯನ, ಉತ್ತರ ಕರ್ನಾಟಕದ

ಕೋಟೆಗಳು, ರಾಯಚೂರು ಕೋಟೆಗಳು, ಆಂಧ್ರಪ್ರದೇಶದ ಕೋಟೆಗಳು, ಕೆಳದಿ ಕೋಟೆಗಳ ಬಗ್ಗೆ, ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ನಿಡುಗಲ್ಲು ಒಂದು ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯದಲ್ಲಿ ಬೆಳಗಾವಿ ಮತ್ತು ಚಿತ್ರದುರ್ಗ ಜಿಲ್ಲೆಗಳ ರಕ್ಷಣಾ ವಾಸ್ತುಶಿಲ್ಪ, ತುಮಕೂರು ಜಿಲ್ಲೆಯ ಕೋಟೆಗಳು ಮೊದಲಾದ ಒಂದು ಜಾನಪದೀಯ ಅಧ್ಯಯನ ಸಂಶೋಧನ ಮಹಾಪ್ರಬಂಧಗಳು ನನ್ನ ಅಧ್ಯಯನಕ್ಕೆ ಪೂರಕವಾಗಿದೆ.

ಕರ್ನಾಟಕದ ಗೆಜೆಟೀಯರ್, ಜಿಲ್ಲಾ ಮತ್ತು ತಾಲ್ಲೂಕು ದರ್ಶಿನಿ ವರದಿಗಳು ಕೇಂದ್ರ ಮತ್ತು ರಾಜ್ಯ ಪುರಾತತ್ವ ಇಲಾಖೆಯಿಂದ ಪ್ರಕಟವಾದ ಸಂಚಿಕೆಗಳು, ಗ್ರಂಥಗಳು, ಭಾರತೀಯ ಸರ್ವೇಕ್ಷಣ ಇಲಾಖೆ ತಯಾರಿಸಿದ ಭೂಪಟಗಳು ಅಧ್ಯಯನಕ್ಕೆ ಉಪಯುಕ್ತ ಮಾಹಿತಿಗಳನ್ನು ನೀಡಿವೆ. ಕೋಟೆಗಳ ಬಗ್ಗೆ ಇರುವ ಐತಿಹ್ಯಗಳು ಜಾನಪದ ಸಾಹಿತ್ಯ ಹಾಗೂ ಸ್ಥಳೀಯರ ಹೇಳಿಕೆಗಳನ್ನು ಧ್ವನಿಮುದ್ರಿಕೆಯ ಹಾಗೂ ಬರವಣಿಗೆಯ ಮೂಲಕ ಸಂಗ್ರಹಿಸಲಾಯಿತು. ಕೋಟೆಯ ಮುಖ್ಯ ಭಾಗಗಳ ಛಾಯಾಚಿತ್ರಗಳನ್ನು ತೆಗೆದುಕೊಂಡು ಸ್ಥಳದಲ್ಲಿಯೇ ನಕ್ಷೆಯನ್ನು ತಯಾರಿಸಲಾಯಿತು. ಸ್ನೇಹಿತರ ಸಹಾಯದಿಂದ ಕೆಲವು ಭಾಗಗಳನ್ನು ಅಳತೆ ಮಾಡಿಕೊಳ್ಳಲಾಯಿತು. ಈ ಕ್ಷೇತ್ರ ಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿಯನ್ನು ಮೂಲ ಸಾಮಗ್ರಿಯೆಂದು ಪರಿಗಣಿಸಿ ನಿಡುಗಲ್ಲು ಪರಿಸರದಲ್ಲಿ ನಡೆದಿರುವ ಚಾರಿತ್ರಿಕ ಘಟನೆಗಳನ್ನು ಆಧರಿಸಿ ತಾಲ್ಲೂಕು ದರ್ಶನಿ, ಲೇಖನಗಳು, ಗ್ರಂಥಗಳು, ಅಪ್ರಕಟಿತ ಪ್ರಬಂಧ, ಇತಿಹಾಸ ದರ್ಶನಗಳನ್ನು ಗಮನಿಸಿ ವಿವರ ಪಡೆಯಲಾಗಿದೆ. ಈ ಸಂಪ್ರಬಂಧದಲ್ಲಿ ಗ್ರಾಮನಾಮ, ಗ್ರಾಮಚರಿತ್ರೆಯನ್ನು ಪರಿಚಯಿಸುವುದರೊಂದಿಗೆ ಅಧ್ಯಯನಕ್ಕೆ ಒಳಪಡಿಸಿರುವ ಪ್ರತಿಯೊಂದು ಕೋಟೆಗೆ ಪೂರಕವಾಗಿ ನಕ್ಷೆ, ಛಾಯಾಚಿತ್ರ, ಪದಕೋಶಗಳನ್ನು ಈ ಅನುಬಂಧದಲ್ಲಿ ನೀಡಲಾಗಿದೆ.

# ಅಧ್ಯಾಯ ೨

# ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

## ೨.೧. ಭೌಗೋಳಿಕತೆ

ಜಗತ್ತಿನಲ್ಲಿ ಬಹುತೇಕ ನಾಗರೀಕತೆಗಳು ಉಗಮವಾಗಿರುವುದು ನದಿಬಯಲಿನಲ್ಲಿ ಹಾಗೂ ಉತ್ತಮ ಹವಾಗುಣವಿರುವ ಪರಿಸರದಲ್ಲಿಯೇ. ಆದ ಕಾರಣ ಇತಿಹಾಸ ಮತ್ತು ಭೂಗೋಳಶಾಸ್ತ್ರಗಳು ಅವಿನಾಭಾವ ಸಂಬಂಧ ಹೊಂದಿದೆ. ಸಹಜವಾಗಿ ಮಾನವನು ಅನಾದಿಕಾಲದಿಂದಲೂ ನೀರಿನ ಸೌಲಭ್ಯವಿರುವ ಕಡೆ ಪರ್ವತ ಶ್ರೇಣಿ, ಬೆಟ್ಟಗುಡ್ಡ, ನದಿಬಯಲು ತೀರಪ್ರದೇಶ ಮೊದಲಾದ ಕಡೆ, ವಾಸಿಸುತ್ತಾ ಬಂದಿದ್ದಾನೆ. ಫಲವತ್ತಾದ ಮಣ್ಣು ಈ ಪ್ರದೇಶಗಳಲ್ಲಿ ಸಿಗುವುದರಿಂದ ಕೃಷಿಗೆ ಯೋಗ್ಯ ಭೂಮಿ ದೊರೆತು ಜನಜೀವನವನ್ನು ಉತ್ತಮಪಡಿಸಿಕೊಳ್ಳಲು ಹಾಗೂ ನಾಗರೀಕತೆ, ಸಂಸ್ಕೃತಿ, ಕಲೆ ಮತ್ತು ಸಾಹಿತ್ಯದ ಅಭಿವೃದ್ಧಿಗೆ ಸಹಕಾರಿಯಾಗುತ್ತದೆ. ಪ್ರಾಕೃತಿಕವಾಗಿ ಸುಭದ್ರವಾದ ಕಡೆ ಮಾನವ ವಾಸ ಮಾಡುತ್ತಿದ್ದರೆ ಆ ಪ್ರಕೃತಿಯೇ ಆತನಿಗೆ ರಕ್ಷಣೆಯಾಗಿ ನಿಲ್ಲುತ್ತದೆ.

ಉದಾ: ಭಾರತವನ್ನು ಪರಕೀಯರ ದಾಳಿಯಿಂದ ಹಾಗೂ ನೈಸರ್ಗಿಕ ವಿಕೋಪಗಳಿಂದ ಸುರಕ್ಷಿತವಾಗಿಟ್ಟಿದೆ. ಏಕೆಂದರೆ ಭಾರತವು ಪೂರ್ವ, ಪಶ್ಚಿಮ ಹಾಗೂ ದಕ್ಷಿಣ ಭಾಗಗಳಲ್ಲಿ ಸಮುದ್ರಗಳಿಂದ ಆವರಿಸಲ್ಪಟ್ಟಿದ್ದು ಮತ್ತು ಉತ್ತರದಲ್ಲಿ ಹಿಮಾಲಯ ಪರ್ವತವು ರಕ್ಷಣೆ ಗೋಡೆಯಾಗಿ ಇರುವುದರಿಂದ, ನಮ್ಮ ದೇಶವನ್ನು ಕೋಟೆಗಳಂತೆ ರಕ್ಷಿಸಿ ಸಂಪತ್ತನ್ನು ಹೆಚ್ಚಿಸುವುದರ ಜೊತೆಗೆ ನಮ್ಮ ಸಾಂಸ್ಕೃತಿಕ ಶ್ರೀಮಂತಿಕೆಗೆ ಸಹಾಯಕವಾಗಿದೆ.

ನಿಡುಗಲ್ಲು ಪರಿಸರ ಕರ್ನಾಟಕದ ಗಡಿಪ್ರದೇಶವಾಗಿದ್ದು, ಸುತ್ತಲೂ ಆಂಧ್ರಪ್ರದೇಶದ ಗಡಿಯಿಂದ ಸುತ್ತುವರೆದಿದ್ದು ಪಶ್ಚಿಮದಲ್ಲಿ ಚಿತ್ರದುರ್ಗವಿದೆ. ನಿಡುಗಲ್ಲು ಪರಿಸರದಲ್ಲಿ ಬರುವ ದೇವರಬೆಟ್ಟ, ಹೊಸಕೋಟೆ, ಬಂಗಾರನಾಯಕನಬೆಟ್ಟ, ಕನ್ನಮೇಡಿ ಕೋಟೆಗಳನ್ನು ಅಧ್ಯಯನ

ಮಾಡಲಾಗಿದೆ. ಪಾವಗಡ ತಾಲ್ಲೂಕು ಒಟ್ಟು ೧,೨೫೪ ಚದರ ಕಿ.ಮೀ.ಗಳಷ್ಟಿದೆ.[೧] ಪಾವಗಡಕ್ಕೆ ಪಶ್ಚಿಮದಲ್ಲಿ ೨೨ ಕಿ.ಮೀ.ಗಳಷ್ಟು ದೂರದಲ್ಲಿ ನಿಡುಗಲ್ಲು ಎಂಬ ಹೆಸರನ್ನೇ ಹೊಂದಿರುವ ಹಳ್ಳಿಯು ದಕ್ಷಿಣ ಮತ್ತು ಪೂರ್ವ ಭಾಗದಲ್ಲಿದೆ. ಈ ಸ್ಥಳವು ಒಂದು ಕಾಲದಲ್ಲಿ ಪ್ರಖ್ಯಾತಿಯನ್ನು ಪಡೆದಿದ್ದು, ಈಗ ಅದೇ ಹೆಸರಿನ ಹೋಬಳಿಯ ಕೇಂದ್ರವಾಗಿದೆ.[೨]

### ೨.೧.೧. ಬೆಟ್ಟಗಳು:

ನಿಡುಗಲ್ಲು ಪರಿಸರದ ನೆಲಮಟ್ಟವು ಸಮುದ್ರಮಟ್ಟದಿಂದ ಸುಮಾರು ೨೩೦೦ ಅಡಿಗಳಷ್ಟು ಎತ್ತರದಲ್ಲಿದೆ. ತುಮಕೂರು ಜಿಲ್ಲೆಯ ಪೂರ್ವಾರ್ಧದಲ್ಲಿ ಉತ್ತರ ದಕ್ಷಿಣಾಭಿಮುಖವಾಗಿ ಹರಡಿರುವ ಕಣಶಿಲೆಯ ಬೆಟ್ಟಗಳ ಸಾಲು ನಿಡುಗಲ್ಲು ಪರಿಸರದ ಮುಖಾಂತರ ಹಾದುಹೋಗಿದೆ.[೩] ಈ ಬೆಟ್ಟಸಾಲುಗಳು ೨೫೦ ಕೋಟಿ ವರ್ಷಗಳ ಹಿಂದೆ ರೂಪಗೊಂಡಿತ್ತೆಂದು ಭೂ ವಿಜ್ಞಾನಿಗಳು ಅಭಿಪ್ರಾಯಪಟ್ಟಿದ್ದಾರೆ.[೪]

ನಿಡುಗಲ್ಲು ಪರಿಸರದಲ್ಲಿ ಹಲವಾರು ಬೆಟ್ಟಗಳು ಇದ್ದು ಪ್ರಮುಖವಾಗಿ ನಿಡುಗಲ್ಲು ಬೆಟ್ಟ ಸಮುದ್ರಮಟ್ಟದಿಂದ ೩೭೭೭ ಅಡಿ ಎತ್ತರವಿದೆ.[೫] ಇಲ್ಲಿರುವ ಶಿಲೆಗಳು ಗ್ರಾನೈಟ್ ಜಾತಿಗೆ ಸೇರಿದವು. ಭೀಮಾಕೃತಿಯ ಅಖಂಡ ಏಕಶಿಲೆಯನ್ನು ಹೊಂದಿದೆ. ಪಾವಗಡ ಬೆಟ್ಟ ಸಮುದ್ರ ಮಟ್ಟದಿಂದ ೯೧೮ ಮೀಟರ್ (೩೦೨೯ ಅಡಿಗಳು) ಎತ್ತರವಾಗಿದ್ದು[೬] ಒಂದೇ ಗುಂಡುಕಲ್ಲಿನಿಂದ ಕೂಡಿರದೆ ಇದರ ಸುತ್ತಮುತ್ತಲಿನಲ್ಲಿ ಹಬ್ಬಿರುವ ಬೆಟ್ಟಗಳು ಹೆಬ್ಬಂಡೆಗಳು ಅಗಾಧವಾದ ಎತ್ತರದ ಗುಂಡು–ಕಲ್ಲುಗಳಿಂದ ಪ್ರಾಕೃತಿಕವಾಗಿ ಭದ್ರಪಡಿಸಿರುವ ಕೋಡುಗಲ್ಲುಗಳಿಂದ ಕೂಡಿರುವ ಎತ್ತರವಾದ ಬೆಟ್ಟ ಗುಡ್ಡಗಳಿಂದ ಕೂಡಿದೆ. ಸುಮಾರು ೧೦೦ ಅಡಿ ಎತ್ತರದ ಹೆಬ್ಬಂಡೆಗಳನ್ನು ಹೊಂದಿರುವುದೇ ಈ ಬೆಟ್ಟದ ವೈಶಿಷ್ಟ್ಯ. ಕಾಮನದುರ್ಗದ ಬೆಟ್ಟ ಸಮುದ್ರ ಮಟ್ಟದಿಂದ ೩೭೩೦ ಅಡಿ ಎತ್ತರವಿದ್ದು, ತುಂಬಾ ಉದ್ದ ಮತ್ತು ವಿಶಾಲವಾಗಿದೆ. ಈ ಬೆಟ್ಟದಲ್ಲಿ ಸುಮಾರು ೨೦೦೦ ಕುಟುಂಬಗಳು ವಾಸ ಮಾಡಬಹುದಾದಷ್ಟು ಜಾಗವಿದೆ.[೭] ಹೊಸಕೋಟೆ ಬೆಟ್ಟವು ಏಕಶಿಲಾ ಬೆಟ್ಟವಾಗಿದ್ದು, ಮೇಲ್ಭಾಗದಲ್ಲಿ ವಿಶಾಲವಾಗಿದೆ. ಬಂಗಾರನಾಯಕನ ಬೆಟ್ಟ ಮತ್ತು ಕನ್ನಮೇಡಿ ಬೆಟ್ಟಗಳು ಸಹ ಗ್ರಾನೈಟ್ ಶಿಲೆಯಿಂದ ಕೂಡಿದ್ದು, ಬೃಹತ್ ಆದ ಕಲ್ಲುಗುಂಡುಗಳಿವೆ.[೮] ಹೀಗೆ ನಿಡುಗಲ್ಲು ಪರಿಸರದಲ್ಲಿ ಬೆಟ್ಟಗಳ ಸಾಲುಗಳೇ ಇವೆ.

### ೨.೧.೨. ಜಲಸಂಪತ್ತು:

ಜಲಸಂಪತ್ತು ಮನುಷ್ಯನಿಗೆ ಎಷ್ಟು ಮುಖ್ಯ ಎಂಬುದು ಇತಿಹಾಸದ ಅಧ್ಯಯನದಿಂದ ತಿಳಿದುಬರುತ್ತದೆ. ಮೊದಲು ಮಾನವನ ಬದುಕಿನ ಕುರುಹುಗಳು ಲಭ್ಯವಾಗುವುದು ನದಿ ಬಯಲಿನಲ್ಲಿಯೇ ಎಂಬುದನ್ನು ಇಲ್ಲಿ ನೆನೆಯಬೇಕು.[೯] ಜಲಸಂಪತ್ತು ನಿಡುಗಲ್ಲು ಪರಿಸರದಲ್ಲಿ ಕ್ಷೀಣವಾಗಿದ್ದು, ಪೂರ್ವಕ್ಕೆ ನಾಗಲಮಡಿಕೆಯಲ್ಲಿ ಉತ್ತರ ಪಿನಾಕಿನಿ ನದಿಯು ಹರಿಯುತ್ತದೆ. ಕೊತ್ತೂರು, ಹರಿಹರಪುರ, ಚನ್ನಕೇಶವಪುರ, ಮುಗದಾಳ ಬೆಟ್ಟ, ಕೊಂಡೇತಿಮ್ಮನಹಳ್ಳಿ, ದೇವಲಕೆರೆ,

ನಿಡುಗಲ್ಲು ಬೆಟ್ಟಗಳು, ಶೈಲಾಪುರ, ಓಬಳಾಪುರದ ಬೆಟ್ಟಗಳ ರೇಖಾತ್ಮಕ ಪ್ರದೇಶದಲ್ಲಿ ಮಳೆಯ ನೀರು ಪೂರ್ವ ಮತ್ತು ಪಶ್ಚಿಮಕ್ಕೆ ಹರಿಯುವುದರಿಂದ ಅನೇಕ ಹಳ್ಳಗಳು, ಕೊರಕಲುಗಳು ಉಂಟಾಗಿದ್ದು, ಇವುಗಳಿಗೆ ಕೆರೆ, ಕುಂಟೆ, ಕಟ್ಟೆಗಳನ್ನು ಕಟ್ಟಿ ಮಳೆಯ ನೀರನ್ನು ಸಂಗ್ರಹಿಸಿ ವ್ಯವಸಾಯ ಪಶುಗಳಿಗೆ ಮತ್ತಿತರೆ ಕೆಲಸಗಳಿಗೆ ಉಪಯೋಗಿಸುವರು. ಈ ಪರಿಸರದಲ್ಲಿ ೧೨೯ ಕೆರೆಗಳಿದ್ದು ವಿರುಪ ಸಮುದ್ರದ ಕೆರೆ (೩೭೨ ಎಕರೆ), ಅರಸೀಕೆರೆಯ ಹಂಪಯ್ಯನ ಕೆರೆ (೨೭೫ ಎಕರೆ), ಪಳವಳ್ಳಿಯ ಕೆರೆ (೭೦೦ ಎಕರೆ) ವಳ್ಳೂರಿನ ಕೆರೆ (೩೧೦), ನಾಗಲಮಡಿಕೆ ಕೆರೆ (೨೦೬ ಎಕರೆ), ಕಾಮನದುರ್ಗದ ಅಕ್ಕಮ್ಮನ ಕೆರೆ (೬೫೨ ಎಕರೆ)ಗಳು ಪ್ರಮುಖವಾದ ಕೆರೆಗಳಾಗಿವೆ.[೧೦] ೧೫೬೦ರ ಶಾಸನವು ತಿಮ್ಮಣ್ಣ ನಾಯಕ ಅರಸಿಯು ದೊಡ್ಡಕೆರೆಯನ್ನು ಕಟ್ಟಿಸಿದಳು ಎಂದು ಉಲ್ಲೇಖಿಸಿದೆ.[೧೧] ಈ ಪ್ರದೇಶದಲ್ಲಿ ಮಳೆಯ ಪ್ರಮಾಣ ೧೯೯೨ ರಿಂದ ೨೦೦೩ರವರೆಗಿನ ೧೨ ವರ್ಷಗಳಲ್ಲಿ ಸರಾಸರಿ ೪೩ ಸೆಂ.ಮೀ. ಮಳೆ ಆಗಿದ್ದು, ಇತ್ತೀಚೆಗೆ ತಲಪಿರುಗೆ, ತೆರೆದ ಬಾವಿಗಳು, ಬತ್ತಿಹೋಗಿ ಹೆಚ್ಚಿದ ಕೊಳವೆ ಬಾವಿಗಳಿಂದ ಅಂತರ್ಜಲದ ಮಟ್ಟ ೩೦೦ ಅಡಿಗಳಿಗಿಂತಲೂ ಹೆಚ್ಚು ಆಳಕ್ಕೆ ಇಳಿದಿದೆ.[೧೨]

### ೨.೧.೩. ಭೂ ಇತಿಹಾಸ ಮತ್ತು ಖನಿಜ ಸಂಪತ್ತು:

ನಿಡುಗಲ್ಲು ಪರಿಸರದಲ್ಲಿರುವ ಬೆಟ್ಟ ಸಾಲುಗಳು ಭೂ-ವಿಜ್ಞಾನಿಗಳ ಪ್ರಕಾರ ೨೫೦ ಕೋಟಿ ವರ್ಷಗಳ ಹಿಂದೆ ರೂಪುಗೊಂಡಿತ್ತು ಎಂದು ಹೇಳಿದ್ದಾರೆ.[೧೩] ನಿಡುಗಲ್ಲು ಪರಿಸರದಲ್ಲಿ ಅಂತಹ ಹೇಳಿಕೊಳ್ಳುವ ಯಾವ ನಿಕ್ಷೇಪಗಳು ದೊರೆತಿಲ್ಲ. ಬರ್ಮಾರೂಬಿಯನ್ನು ಹೋಲುವ ರೂಬಿಸ್ಟೋನ್, ಕೆಂಪು ಹರಳುಗಳು, ಹುಲಿಬೆಟ್ಟ, ಕೃಷ್ಣಾಪುರ, ಜಾಜುರಾಯನಹಳ್ಳಿ, ಅಚ್ಚಮ್ಮನಹಳ್ಳಿ ಮೊದಲಾದ ಕಡೆ ಗುಲಗಂಜಿ ಗಾತ್ರದಿಂದ ನಿಂಬೆಹಣ್ಣಿನ ಗಾತ್ರದವರೆಗೆ ದೊರೆಯುತ್ತವೆ. ಅಚ್ಚಮ್ಮನಹಳ್ಳಿ, ಉತ್ತರ ಪಿನಾಕಿನಿ ನದಿಯ ದಡದಲ್ಲಿ ಉತ್ತಮವಾದ ಮರಳು, ವಾಷಿಂಗ್ ಸೋಡಾ, ಸುಣ್ಣಕಲ್ಲು, ಕರಿಕಲ್ಲು, ಬೆಣಚುಕಲ್ಲು ದೊರೆಯುತ್ತವೆ. ಕಪ್ಪು ಶಿಲೆ, ಡಾಲರೈಟ್ ಶಿಲೆಗಳು ತಾಳೆಮರದಹಳ್ಳಿಯ ಬಳಿ ಹಾಗೂ ಸುಣ್ಣ ಕಲ್ಲು ಜಾಜೂರಾಯನಹಳ್ಳಿ, ಪಳವಳ್ಳಿ, ವೀರಮ್ಮನಳ್ಳಿ ಮೊದಲಾದ ಕಡೆ ದೊರೆಯುತ್ತವೆ. ಗ್ರಾನೈಟ್ ಶಿಲೆಯು ಈ ಪರಿಸರದ ಎಲ್ಲಾ ಕಡೆ ದೊರೆಯುವ ಖನಿಜಸಂಪತ್ತಾಗಿದೆ. ಕಲ್ನಾರು ಮತ್ತು ಅಭ್ರಕ ಅಲ್ಪ ಪ್ರಮಾಣದಲ್ಲಿ ದೊರೆಯುತ್ತದೆ. ಇವುಗಳನ್ನು ಬಿಟ್ಟರೆ ನಿಡುಗಲ್ಲು ಪರಿಸರದಲ್ಲಿ ಯಾವ ವಿಧವಾದ ಆರ್ಥಿಕವಾಗಿ ಲಾಭತರುವ ಮುಖ್ಯ ಖನಿಜಗಳು ದೊರೆಯುವುದಿಲ್ಲ.[೧೪]

### ೨.೧.೪. ಅರಣ್ಯ ಹಾಗೂ ಪ್ರಾಣಿ ಸಂಪತ್ತು:

ನಿಡುಗಲ್ಲು ಪರಿಸರದಲ್ಲಿ ಬರುವ ಅರಣ್ಯ ಪ್ರಮುಖವಾಗಿ ನಿಡುಗಲ್ಲು, ಮುಗದಾಳಬೆಟ್ಟ, ಬಂಗಾರನಾಯಕನ ಬೆಟ್ಟ, ಕಾಮನದುರ್ಗ, ಕನ್ನಮೇಡಿ ಮೊದಲಾದ ಬೆಟ್ಟಗಳಲ್ಲಿ ಹರಡಿಕೊಂಡಿದೆ.

ಇದು ೫೮೭೫ ಹೆಕ್ಟೇರುಗಳಷ್ಟು ವಿಶಾಲವಾಗಿದ್ದು[೧೫] ಇಲ್ಲಿ ಮೋಟು ಗಿಡ-ಗಂಟಿ, ಪೊದೆ, ಕಕ್ಕೆ, ತಂಗಡಿ, ನೆಲಬಂದರಿ, ಕಾರೆ, ಬೇವು, ಅಡವಿ, ಹಲಸು, ಜಾಲಿ, ಅಡವಿಜಾಲಿ, ಚಿಗರೆ, ಜಂಬೆ, ಹಿಪ್ಪೆ, ಹೊನ್ನೆ, ಹುಣಸೆ, ಅಂಕೋಲೆ, ನೀಲಗಿರಿ, ಮರವಲೆ, ದೇವದಾರು, ಪಾಪಸುಕಳ್ಳಿ, ಬಂದಕಳ್ಳಿ, ಅಂಟುವಾಳ, ಅರಳೆ, ಹೊಂಗೆ, ಆಕಾಶಗರುಡ, ಚಕ್ರಾಣಿ, ಈಶ್ವರಿ, ನಿರ್ಗುಂಡಿ, ಆಡುಸೋಗೆ, ಚಕ್ರಮೂಲ, ದೇವಕಣಗಿಲೆ, ಪಾದರಿ, ಪ್ರೀತಿಮಲ್ಲಿಗೆ, ಗಂಟಾಪುಷ್ಪಗಳು ಮೊದಲಾದ ಅರಣ್ಯ ಸಂಪತ್ತು ಬೆಳದುಕೊಂಡಿವೆ.

ಈ ಅರಣ್ಯವಲಯದಲ್ಲಿ ಕಾಡುಪ್ರಾಣಿಗಳು ಹೆಚ್ಚಾಗಿಲ್ಲವಾದರೂ ನರಿ, ಕರಡಿ, ತೋಳ, ಜೊಂಪುತೋಳ, ಕಾಡುಹಂದಿ, ಮುಳ್ಳುಹಂದಿ, ದೊಡ್ಡ ಜಿಂಕೆ, ಮುಂಗುಸಿ, ಉಡ, ವಿಷಜಂತುಗಳಾದ ಮಿಳನಾಗರ, ಗೋಧಿನಾಗರ, ರಕ್ತಪಂಜರ, ಕೊಂಡಶಿಲ್ಲಾ ಮೊದಲಾದವುಗಳನ್ನು ಇಲ್ಲಿ ಕಾಣಬಹುದು.[೧೬]

### ೨.೧.೫. ಭೂಗುಣ ಮತ್ತು ವಾಯುಗುಣ:

ನಿಡುಗಲ್ಲು ಪರಿಸರವು ಬೆಟ್ಟಗಳ ಸಾಲಿನಿಂದ ಕೂಡಿದ್ದು, ಪೂರ್ವದಿಕ್ಕಿನಲ್ಲಿ ಗ್ರಾನೈಟ್ ಶಿಲೆ, ಪಶ್ಚಿಮದಲ್ಲಿ ನೈಸ್ ಶಿಲೆಗಳಿಂದ ಕೂಡಿದೆ.[೧೭] ಇಲ್ಲಿಯ ಭೂಮಿಯು ನಾಲ್ಕು ವಿಧಗಳಿಂದ ಕೂಡಿದೆ. ಚೌಳುನೆಲ, ಕಪ್ಪುನೆಲ, ಕಲ್ಲುಗಳಿಂದ ಕೂಡಿದಮಣ್ಣು[೧೮] ಹಾಗೂ ಹೆಚ್ಚಿನ ಪ್ರಮಾಣದಲ್ಲಿರುವ ಕೆಂಪು ಮಿಶ್ರಿತಮಣ್ಣು,[೧೯] ಭೌಗೋಳಿಕವಾಗಿ ಅಕ್ಷಾಂಶ ೧೩°-೫೩N. ರಿಂದ ೧೪°-೨೧Nವರೆಗೆ ರೇಖಾಂಶ ೭೭° E ರಿಂದ ೭೭° ೩೧, E ವರೆಗಿನ ಪ್ರದೇಶದಲ್ಲಿ ಆವರಿಸಲ್ಪಟ್ಟಿದೆ. ಮಳೆಯ ಪ್ರಮಾಣ ಈ ಪ್ರದೇಶದಲ್ಲಿ ೧೯೯೨ ರಿಂದ ೨೦೦೩ರವರೆಗಿನ ೧೨ ವರ್ಷಗಳಲ್ಲಿ ಸರಾಸರಿ ೪೩ ಸೆಂ.ಮೀಟರ್ ಆಗಿದೆ.[೨೦] ಫೆಬ್ರುವರಿ ತಿಂಗಳ ಕೊನೆಯಿಂದ ಇಲ್ಲಿ ಉಷ್ಣಾಂಶವು ಹೆಚ್ಚುತ್ತಾ ಮಾರ್ಚ್ ಮತ್ತು ಏಪ್ರಿಲ್ ತಿಂಗಳಲ್ಲಿ ಸುಡುಬಿಸಿಲು ಪ್ರಾರಂಭವಾಗುತ್ತದೆ. ಮೇ ತಿಂಗಳ ಕೊನೆಯಲ್ಲಿ ಮುಂಗಾರು ಮಳೆ ಆರಂಭವಾಗಿ ಸೆಪ್ಟೆಂಬರ್‌ವರೆಗೂ ವಾಯುಗುಣ ಹಿತಕರವಾಗಿರುತ್ತದೆ. ಅಕ್ಟೋಬರ್ ಮತ್ತು ನವ್ಹೆಂಬರ್ ತಿಂಗಳಲ್ಲಿ ಹಿಂಗಾರು ಮಳೆ ಶುರುವಾಗಿ ನವ್ಹೆಂಬರ್ ಕೊನೆಯ ವೇಳೆಗೆ ಸಂಪೂರ್ಣ ನಿಂತುಹೋಗುತ್ತದೆ. ಕೆಲವು ಬಾರಿ ಆಂಧ್ರ ಮತ್ತು ತಮಿಳುನಾಡುಗಳಲ್ಲಿ ಚಂಡಮಾರುತಗಳು ಉಂಟಾದಾಗ ನಾಲ್ಕೈದುದಿನ ಜಡಿಮಳೆ ಬೀಳುವ ಸಂಭವವಿರುತ್ತದೆ. ಡಿಸೆಂಬರ್ ತಿಂಗಳಲ್ಲಿ ಮಂಜು ಸುರಿಯಲು ಪ್ರಾರಂಭವಾಗಿ ಹಗಲು-ರಾತ್ರಿ ಮೈನಡುಗುವ ಚಳಿ ಇರುತ್ತದೆ.[೨೧]

### ೨.೨. ಪ್ರಾಗಿತಿಹಾಸ:

ಆದಿಮಾನವ ಬರವಣಿಗೆಯ ಕಲೆಯನ್ನು ಕರಗತ ಮಾಡಿಕೊಳ್ಳದೇ ಇದ್ದುದರಿಂದ ಆತನ ಇತಿಹಾಸವನ್ನು ಆತ ಬಿಟ್ಟು ಹೋಗಿರುವ ಭೌತಿಕ ಅವಶೇಷಗಳನ್ನು ಆಧರಿಸಿ

ತಿಳಿದುಕೊಳ್ಳಬೇಕಾಗಿದೆ. "ಬರವಣಿಗೆಯ ಕಲೆಯನ್ನು ತಿಳಿಯುವ ಮುನ್ನ ಘಟಿಸಿದ ಒಂದು ಪ್ರದೇಶ, ದೇಶ, ಜನಾಂಗಕ್ಕೆ ಸಂಬಂಧಿಸಿದ ಇತಿಹಾಸವನ್ನು ಇತಿಹಾಸ ಪೂರ್ವಕಾಲ ಎಂದು" ಡಾ.ಹೆಚ್.ಡಿ. ಸಂಕಾಲಿಯ ವಿಶ್ಲೇಷಿಸಿದ್ದಾರೆ.[೨೨]

ಪುರಾತತ್ವಶಾಸ್ತ್ರಜ್ಞರು ಪ್ರಾಗಿತಿಹಾಸ ಕಾಲವನ್ನು ೫ ಲಕ್ಷ ವರ್ಷಗಳಿಂದ ಕ್ರಿಸ್ತ ಶಕೆಯ ಆರಂಭದವರೆಗೂ ಎಂದು ನಿಗಧಿಪಡಿಸಿದ್ದಾರೆ.[೨೩] ನಿಡುಗಲ್ಲು ಪ್ರದೇಶವು ಬೆಟ್ಟ ಗುಡ್ಡಗಳಿಂದ ಆವೃತ್ತವಾಗಿರುವುದರಿಂದ ಶಿಲಾಯುಗದ ಮಾನವನಿಗೆ ವಾಸಯೋಗ್ಯ ಸ್ಥಳವಾಗಿತ್ತು. ಮಾನವನು ಪ್ರಾಣಿಗಳನ್ನು ಬೇಟೆಯಾಡಲು, ಪ್ರಾಣಿಯನ್ನು ಕತ್ತರಿಸಲು ಮತ್ತು ಚರ್ಮ ಬೇರ್ಪಡಿಸಲು, ಗಿಡ ಕತ್ತರಿಸಲು, ಅದರ ತೊಗಟೆ ತೆಗೆಯಲು, ಗೆಡ್ಡೆಗೆಣಸು ಅಗೆದುತೆಗೆಯಲು ಮೊದಲಾದ ಕೆಲಸಗಳಿಗೆ ವಿವಿಧ ಶೈಲಿಯ ಶಿಲೆಯಿಂದ ಮಾಡಿದ ಆಯುಧಗಳನ್ನು ಬಳಸುತ್ತಿದ್ದರು. ಈ ಕಾಲವನ್ನು ಶಿಲಾಯುಗ ಎನ್ನುವರು. ಈ ಪ್ರದೇಶದಲ್ಲಿ ವಿವಿಧ ರೀತಿಯ ಕೈಕೊಡಲಿ, ಸೀಳುಗತ್ತಿ, ಬಾಚಿಮೊನೆ, ಸುತ್ತಿಗೆ, ಉಳಿ, ಕವಣಿಕಲ್ಲು ಮೊದಲಾದ ಆಯುಧಗಳು ದೊರೆತಿವೆ. ಅದೇ ರೀತಿ ಸೂಕ್ಷ್ಮ ಶಿಲಾಯುಗದ ಆಯುಧಗಳು ಸಹ ದೊರೆತಿವೆ.[೨೪]

ಮಾನವ ಆಯುಧೋಪಕರಣಗಳನ್ನು ಉಜ್ಜಿ ನಯಗೊಳಿಸಿ ಅದರ ಸೌಂದರ್ಯವನ್ನು ವೃದ್ಧಿಸಿ ತನಗೆ ಅನುಕೂಲವಾಗುವಂತೆ ಮಾಡಿಕೊಂಡು ಉಪಯೋಗಿಸಲು ಆರಂಭಿಸಿದ್ದರಿಂದ ಈ ಯುಗವನ್ನು ನವಶಿಲಾಯುಗವೆಂದು ಕರೆಯಲಾಗಿದೆ.[೨೫] ಈ ಹಂತದಲ್ಲಿ ಮಾನವ ಒಂದೆಡೆ ನೆಲೆ ನಿಂತು ಕೃಷಿ ಮತ್ತು ಪಶುಪಾಲನೆಯನ್ನು ಆರಂಭಿಸಿದನು. ಈ ಯುಗದ ಬೂದಿದಿನ್ನೆಗಳು, ಶಿಲೆಯ ಆಯುಧಗಳು ದೊರೆತಿವೆ.

ಕೃಷಿ, ಪಶುಪಾಲನೆ, ಬೇಟೆ, ಮೀನುಹಿಡಿಯುವುದು, ತಾಮ್ರ ಕರಗಿಸುವ, ಲೋಹಗಾರಿಕೆ ಕಲೆ, ಕೃಷಿ ಸಂಬಂಧಿ ಆಯುಧ, ಮನೆ ವಿನ್ಯಾಸ, ಚಕ್ರಗಳ ಸಹಾಯದಿಂದ ಕಪ್ಪು, ಕಂದುಬಣ್ಣದ ಮಡಿಕೆ ತಯಾರಿಸುವ ಕಾಲವನ್ನು ಶಿಲಾತಾಮ್ರಯುಗ ಎಂದು ಕರೆಯಲಾಗುತ್ತದೆ. ನಿಡುಗಲ್ಲು ಪರಿಸರದಲ್ಲಿ ಈ ಕಾಲಕ್ಕೆ ಸಂಬಂಧಿಸಿದ ಜೋರ್ವೆ ಮಾದರಿಯ ಮಡಿಕೆ ಭಾಗಗಳು ಸಿಕ್ಕಿವೆ.[೨೬] ಕಬ್ಬಿಣದ ಬಳಕೆಯನ್ನು ತಿಳಿದಿದ್ದ ಜನರು ತಾವು ವಾಸಿಸುತ್ತಿದ್ದ ಪ್ರದೇಶದಲ್ಲಿ ವರ್ತುಲಾಕಾರದ ಬೃಹತ್ ಶಿಲಾಸಮಾಧಿಗಳು, ಸ್ವಸ್ತಿಕಾಕಾರದ ಬೃಹತ್ ಶಿಲಾಸಂಪುಟಗಳು, ಒಳಗೆ ಮೆರಗು ಹಾಕಿರುವ ದೊಡ್ಡ ಮಡಿಕೆ, ಮಾನವನ ಅಸ್ಥಿಗಳು, ಮೊದಲಾದವುಗಳು ಬೃಹತ್ ಶಿಲಾಯುಗಕ್ಕೆ ಸಂಬಂಧಿಸಿದ ಅವಶೇಷಗಳಾಗಿವೆ.[೨೭] ನೂತನ ಹಾಗೂ ಬೃಹತ್ ಶಿಲಾ ಸಂಸ್ಕೃತಿಗಳ ನೆಲೆಗಳಲ್ಲಿಯೇ ಇತಿಹಾಸ ಆರಂಭಕಾಲದ ಸಂಸ್ಕೃತಿಯ ಅವಶೇಷಗಳು ದೊರೆತಿರುವುದು ಗಮನಾರ್ಹ.[೨೮] ಈ ಕಾಲಕ್ಕೆ ಸಂಬಂಧಿಸಿದ ಕೆಂಪು, ಕಪ್ಪು, ಕೆಂಪು-ಕಪ್ಪು ಬಣ್ಣ ಲೇಪನದ ಮೇಲೆ ಬಿಳಿ ವರ್ಣದ ಗೆರೆಗಳುಳ್ಳ ಮಡಿಕೆ, ಕೆಂಪು ಲೇಪನದ ಬಿಳಿವರ್ಣದ ಮಡಿಕೆಗಳು ದೊರೆತಿವೆ.

## ಪಾವಗಡ ತಾಲ್ಲೂಕು

| ಕ್ರ ಸಂ. | ಗ್ರಾಮ/ನೆಲೆಯ ಹೆಸರು | ಹಳೆ ಶಿಲಾಯುಗ | | | ಸೂಕ್ಷ್ಮ ಶಿಲಾ ಯುಗ | ನೂತನ ಶಿಲಾ ಯುಗ | ಶಿಲಾ ತಾಮ್ರ ಯುಗ | ಬೃಹತ್ ಶಿಲಾಯುಗ | | ಇತಿಹಾಸ ಆರಂಭ ಕಾಲ | ಒಟ್ಟು | ಇತರೆ |
|---|---|---|---|---|---|---|---|---|---|---|---|---|
| | | ಆದಿ | ಮಧ್ಯ | ಅಂತ್ಯ | | | | ನೆಲೆ | ಗೋರಿ | | | |
| ೧. | ಕಣಿಕಲ ಬಂಡೆ | | | | | | | | ✓ | | | |
| ೨. | ಕತ್ತಿ ಕ್ಯಾತನಹಳ್ಳಿ | | | | | | | | ✓ | | | |
| ೩. | ತಪ್ಪಗನಾದೊಡ್ಡಿ | | | | | | | | ✓ | | | |
| ೪. | ನಾಗಲಾಪುರ | | | ✓ | ✓ | ✓ | | | | | | |
| ೫. | ನಿಡುಗಲ್ಲು | | ✓ | ✓ | ✓ | ✓ | ✓ | | ✓ | ✓ | | |
| ೬ | ಪಳವಳ್ಳಿ | | | | | | | | ✓ | | | |
| ೭ | ಪಾವಗಡ | | | | | ✓ | | ✓ | | ✓ | | |
| ೮. | ಬಸವನಬೆಟ್ಟ | | | | | | | | ✓ | | | |
| ೯. | ಬೂದಿಬೆಟ್ಟ | | | | | ✓ | | | ✓ | | | |
| ೧೦. | ಮರಿದಾಸನಹಳ್ಳಿ | | | | | ✓ | | | ✓ | | | |
| ೧೧. | ಯಲ್ಲಪ್ಪನಾಯಕನ ಹಳ್ಳಿ | | | | | ✓ | | ✓ | | ✓ | | |
| ೧೨. | ಯಲ್ಲಪ್ಪನಾಯಕನ ಹೊಸಕೋಟೆ | ✓ | ✓ | ✓ | | ✓ | ✓ | ✓ | | ✓ | | |
| ೧೩. | ರಾಚಮಾರನಹಳ್ಳಿ | | | | | ✓ | | | | ✓ | | |
| ೧೪. | ಕನ್ನಮೇಡಿ | | | | | ✓ | | ✓ | | | | |
| ೧೫. | ಮುಗದಾಳಬೆಟ್ಟ | | | | | ✓ | | | | | | |
| ೧೬ | ಕೋಟಗುಡ್ಡ | | | | | ✓ | | | | | | |
| ೧೭ | ಗುಂಡಾರ್ಲಹಳ್ಳಿ | | | | | ✓ | | | | | | |
| ೧೮. | ಬಂಗಾರನಾಯಕನ ಬೆಟ್ಟ | | | | | | | ✓ | | | | |
| | | ೧ | ೨ | ೩ | ೨ | ೧೨ | ೨ | ೫ | ೮ | ೬ | ೪೧ | |

ಒಟ್ಟಾರೆ ಮಾನವನು ಅನಾದಿಕಾಲದಿಂದಲೂ ಬೆಳೆದುಬಂದ ಹಾದಿಯನ್ನು ವಿವಿಧ ಹಂತಗಳಲ್ಲಿ ಆತ ಬಿಟ್ಟುಹೋದ ಅವಶೇಷಗಳ ಮೂಲಕ ಅಧ್ಯಯನ ಮಾಡಲಾಗಿದೆ. ಕೆ.ಬಿ.ಶಿವತಾರಕ್ ಅವರು ೧೯೯೯ರಲ್ಲಿ ನಿಡುಗಲ್ಲು ಪರಿಸರದಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಪ್ರಾಗಿತಿಹಾಸದ ನೆಲೆಗಳನ್ನು ಶೋಧಿಸಿದರು. ನಾನು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಕೋಟಗುಡ್ಡ, ಕನ್ನಮೇಡಿ, ಗುಂಡಾರ್ಲಹಳ್ಳಿ, ಮುಗದಾಳಬೆಟ್ಟಗಳಲ್ಲಿ ನವಶಿಲಾಯುಗದ ಆಯುಧಗಳು ಹಾಗೂ ಕನ್ನಮೇಡಿಯಲ್ಲಿ ನವಶಿಲಾಯುಗ ಮತ್ತು ಬೃಹತ್ ಶಿಲಾಯುಗಕ್ಕೆ ಸಂಬಂಧಿಸಿದ ಬಿಳಿ ಮತ್ತು ಕೆಂಪು ವರ್ಣದ ಗೀರುಬಂಡೆ ಚಿತ್ರಗಳು ಪತ್ತೆಯಾಗಿವೆ.

## ೨.೩. ಇತಿಹಾಸ ಕಾಲ

ನಿಡುಗಲ್ಲು ಪ್ರದೇಶವು ಐತಿಹಾಸಿಕ, ಧಾರ್ಮಿಕ ಕೇಂದ್ರವಾಗಿದೆ. ಈ ಪರಿಸರವನ್ನು ಗಂಗರು, ರಾಷ್ಟ್ರಕೂಟರು, ನೊಳಂಬ ಪಲ್ಲವರು, ಪೂರ್ವ ಚಾಳುಕ್ಯರು, ಕಲ್ಯಾಣ ಚಾಳುಕ್ಯರು, ಹೊಯ್ಸಳರು, ನಿಡುಗಲ್ಲು ಚೋಳರು, ವಿಜಯನಗರ, ನಿಡುಗಲ್ಲು ನಾಯಕರು, ಹರತಿ ಪಾಳೆಯಗಾರರು, ಹೊಸಕೋಟೆ ಪಾಳೆಯಗಾರರು, ಬಂಗಾರನಾಯಕನ ವಂಶಸ್ಥರು, ಕನ್ನಮೇಡಿ ಪಾಳೆಯಗಾರರು, ಹೈದರ್, ಟಿಪ್ಪು, ಮೈಸೂರಿನ ಒಡೆಯರು ಮೊದಲಾದವರು ಆಳ್ವಿಕೆ ಮಾಡಿರುವರು.

ತುಮಕೂರಿನ ಹಂಪಿ ಎಂದೇ ಕರೆಯಬಹುದಾದ ನಿಡುಗಲ್ಲು ದುರ್ಗವು ಪುರಾಣ ಮತ್ತು ಮಹಾಕಾವ್ಯಗಳಲ್ಲಿ ಉಲ್ಲೇಖಿತಗೊಂಡಿದೆ. ಚೋರಕಥೆಯಲ್ಲಿ ಬರುವ 'ನೀಲಾವತಿ ಪಟ್ಟಣ' ಎಂಬುದಕ್ಕೆ ಅನೇಕ ಉದಾಹರಣೆಗಳುಂಟು. ಹರಿವಂಶದ ಶ್ರದ್ಧಾಫಲವನ್ನು ಹೇಳುವಾಗ ಬರುವ ಒಂದು ಶ್ಲೋಕದಲ್ಲಿ "ಕಾಳಾಂಜನಗಿರಿ" ಎನ್ನುವ ಉಲ್ಲೇಖವಿದೆ. ಶ್ರೀರಾಮಚಂದ್ರನು ಸೀತಾನ್ವೇಷಣೆಗೆ ಈ ಬೆಟ್ಟಕ್ಕೆ ಬಂದುದಾಗಿ ಹೇಳುವ ಕಥೆಯೂ ಉಂಟು. ಅನೇಕ ಶಾಸನಗಳಲ್ಲಿ 'ಕಾಳಾಂಜನಗಿರಿ', 'ಕಾಳಾಂಜನದುರ್ಗ', 'ಕಾಳಾಂಜನಾದ್ರಿ', 'ನಿಡುಗಲ್ಲು', 'ಹರತಿ ನಿಡುಗಲ್ಲು' ಎಂದು ಉಲ್ಲೇಖಗಳಾಗಿವೆ. ಕ್ರಿ. ಶ. ೧೭೦೦ರಲ್ಲಿ ಚನ್ನಪ್ಪ ಕವಿ "ನಿಡುಗಲ್ಲು ದುರ್ಗಾಷ್ಟಕ" ಎನ್ನುವ ಹಾಡೊಂದರಲ್ಲಿ 'ಕಾಳಾಂಜನಾದ್ರಿ' ಎನ್ನುವ ಪದದ ಉಲ್ಲೇಖ ಮಾಡಿದ್ದಾರೆ.[೨೦] ಹೀಗೆ ಪುರಾಣ ಮತ್ತು ರಾಮಾಯಣ ಕಾಲದಿಂದಲೂ ಕಾಲಕ್ರಮೇಣ ತನ್ನ ಹೆಸರನ್ನು ಬದಲಿಸಿಕೊಳ್ಳುತ್ತಾ ಅದರ ಹಿಂದೆ ಒಂದು ಔಚಿತ್ಯವನ್ನು ಉಳಿಸಿಕೊಂಡು ತನ್ನ ಮಹತ್ವ ಸಾರುತ್ತಿರುವುದು ಗಮನಾರ್ಹ.

### ೨.೩.೧. ಗಂಗರು:

ಕರ್ನಾಟಕವನ್ನು ಬಹು ದೀರ್ಘಕಾಲ ಆಳ್ವಿಕೆ ಮಾಡಿದ ಗಂಗರು ಸಾಂಸ್ಕೃತಿಕವಾಗಿ ಮಹತ್ತರ ಸಾಧನೆಯನ್ನು ಮಾಡಿದ್ದಾರೆ. ನಿಡುಗಲ್ಲು ಪ್ರಾಂತ್ಯವು ಸುಮಾರು ಐದು ಶತಮಾನಗಳ

ಕಾಲ ಇವರ ಅಧೀನದಲ್ಲಿತ್ತು. ಕ್ರಿ ಶ. ೪೮೨ರ ತಾಮ್ರಶಾಸನದ ಪ್ರಕಾರ ನಿಡುಗಲ್ಲು ಪ್ರದೇಶವು ದುರ್ವಿನೀತನ ಆಳ್ವಿಕೆಗೆ ಒಳಪಟ್ಟಿತ್ತು ಎಂದು ಉಲ್ಲೇಖಿಸಿದೆ. ಈ ಕಾಲಕ್ಕೆ ನಿಡುಗಲ್ಲು ಒಂದು ಪ್ರಸಿದ್ಧ ನಗರ ಪ್ರದೇಶವಾಗಿತ್ತು.[೨೦] ದುರ್ವಿನೀತನ ನಂತರ ನೊಳಂಬ ಪಲ್ಲವ ರಾಜಸಿಂಹಪೋತನು ಶ್ರೀಪುರುಷನ ಸಾಮಂತನಾಗಿ ಅಧಿಕಾರವನ್ನು ಚಲಾಯಿಸಿದನು. ಜೊತೆಗೆ ಶ್ರೀಪುರುಷನ ಮಕ್ಕಳಾದ ಸೈಗೊಟ್ಟ ಶಿವಮಾರ ಮತ್ತು ಅವನ ಅಣ್ಣ ದುಗ್ಗಮಾರರ ನಡುವಿನ ಸ್ಪರ್ಧೆಯಲ್ಲಿ ಈತ ಶಿವಮಾರನ ಪಕ್ಷ ವಹಿಸಿದ್ದನು. ಒಂದನೇ ರಾಚಮಲ್ಲನು (ಕ್ರಿ ಶ. ೮೧೮–೮೩೭) ನೊಳಂಬರ ಚಾರುಪೊನ್ನೇರನೊಂದಿಗೆ ಸ್ನೇಹದಿಂದ ಇದ್ದು ಆತನ ಮಗ ಒಂದನೇ ಪೊಳಲ್ಚೋರನಿಗೆ ತನ್ನ ಮಗಳಾದ ಜಾಯಬ್ಬೆಯನ್ನು ಕೊಟ್ಟು ವಿವಾಹ ಮಾಡಿಸಿದನು. ಅದೇ ರೀತಿ ಒಂದನೇ ನೀತಿಮಾರ್ಗನು ಸಹ ನೊಳಂಬರ ಒಂದನೆ ಮಹೇಂದ್ರನಿಗೆ ಗಂಗರಾಜಕುಮಾರಿ ಗಾಮಬ್ಬೆಯನ್ನು ಕೊಟ್ಟು ವೈವಾಹಿಕ ಸಂಬಂಧವನ್ನು ಏರ್ಪಡಿಸಿಕೊಂಡನು. ನಂತರ ಎರಡನೇ ನೀತಿಮಾರ್ಗಎರೆಯಪ್ಪನು (ಕ್ರಿ ಶ.೯೦೭) ನೊಳಂಬರ ಆಯಕಟ್ಟಿನ ದುರ್ಗಗಳನ್ನು ವಶಪಡಿಸಿಕೊಂಡನು.[೨೧] ಜೊತೆಗೆ ಒಂದನೇ ಮಹೇಂದ್ರನನ್ನು ಸೋಲಿಸಿ ಕೊಂದು ಹಾಕಿ "ಮಹೇಂದ್ರಾಂತಕ"ನೆಂಬ ಬಿರುದನ್ನು ಪಡೆದನು. ಗಂಗರ ಮೂರನೇ ರಾಚಮಲ್ಲನು ಬೀರನೊಳಂಬ ಅಣ್ಣಿಗನನ್ನು ಸೋಲಿಸಿ ರಾಜ್ಯವನ್ನು ಆತನಿಗೆ ಹಿಂದಿರುಗಿಸಿದನು. ಇವನ ನಂತರ ಗಂಗರ ಮಾರಸಿಂಹನು ಮೊದಲನೇ ಮಹೇಂದ್ರನ ವಂಶಜನಾದ ನೊಳಂಬ ಮಾರಸಿಂಹನ ಮೇಲೆ ಏಕಾಂಗಿಯಾಗಿ ಹೋರಾಡಿ ನೊಳಂಬ ರಾಜ್ಯವನ್ನು ನಾಶಮಾಡಿದನು. ಇದರಿಂದ 'ನೊಳಂಬ ಕುಲಾಂತಕ'ನೆಂಬ ವಿಶೇಷ ಬಿರುದನ್ನು ಪಡೆದನು.[೨೨]

**೨.೩.೨. ಪೂರ್ವ ಚಾಳುಕ್ಯರು:**

ಬಾದಾಮಿ ಚಾಳುಕ್ಯರ ಇಮ್ಮಡಿ ಕೀರ್ತಿವರ್ಮನನ್ನು ರಾಷ್ಟ್ರಕೂಟರ ದಂತಿದುರ್ಗ ಕ್ರಿ ಶ. ೭೩೪ರಲ್ಲಿ ಸೋಲಿಸುವುದರ ಮೂಲಕ ಬಾದಾಮಿ ಚಾಳುಕ್ಯ ಮನೆತನದಲ್ಲಿ ಸಣ್ಣಪುಟ್ಟ ಪ್ರದೇಶಗಳನ್ನಾಳುವ ಚಿಕ್ಕ ಮನೆತನಗಳು ಆರಂಭವಾದವು. ಇವರು ಕ್ರಿ ಶ. ೭೩೪ರಿಂದ ೯೭೩ರವರೆಗೂ ರಾಷ್ಟ್ರಕೂಟರ ಅಧೀನದಲ್ಲೇ ಸುಮಾರು ಎರಡು ಶತಮಾನಗಳ ಕಾಲ ಸಾಮಂತರಾಗಿ ಆಳ್ವಿಕೆ ಮಾಡಿದರು.[೨೩]

ಒಂದನೇ ವಿಜಯಾದಿತ್ಯ (ಕ್ರಿ ಶ. ೭೪೬–೬೪)ನು ನೊಳಂಬ ಪಲ್ಲವ ಅರಸ ಮಂಗಳನನ್ನು ಅಧಿಕಾರಕ್ಕೆ ತಂದು ಆಳ್ವಿಕೆ ಮಾಡುವಂತೆ ಮಾಡಿದನು. ಅಮ್ಮಣರಾಯನ ಆಳ್ವಿಕೆಯ ಕಾಲ ತಿಳಿದಿಲ್ಲ. ಆದರೂ ಮೂರನೇ ವಿಜಯಾದಿತ್ಯನಿಗಿಂತ ಮುಂಚಿನವನು ಎಂದು ತಿಳಿಯಬಹುದಾಗಿದ್ದು, ನೊಳಂಬರ ಒಂದನೇ ಅಯ್ಯಪ್ಪನಿಂದ ಹತನಾದನು. ಮೂರನೇ

ವಿಜಯಾದಿತ್ಯ (ಕ್ರಿ. ಶ. ೮೪೪–೮೯೨) – ಈತನು ನೊಳಂಬರ ಮೇಲೆ ಅನೇಕ ಯುದ್ಧಗಳನ್ನು ಮಾಡಿ ನೊಳಂಬ ಮಂಗಿ ರಾಜನನ್ನು ಕೊಲೆ ಮಾಡಿದನು ಎಂದು ಪೂರ್ವಚಾಳುಕ್ಯ ಶಾಸನಗಳಲ್ಲಿ ಉಲ್ಲೇಖಿತಗೊಂಡಿದೆ. ಎರಡನೇ ಭೀಮ (ಕ್ರಿ. ಶ. ೯೩೫–೯೪೬) ನೊಳಂಬರ ದೊರೆ ಒಂದನೆಯ ಅಯ್ಯಪ್ಪನನ್ನು ಸೋಲಿಸಿ ಆತನ ಪ್ರಾಂತ್ಯವನ್ನು ಆಕ್ರಮಿಸಿದನು.[೩೪] ನೊಳಂಬರ ದೊರೆ ಬೀರ ನೊಳಂಬ ಅಣ್ಣಿಗನು ಚಾಳುಕ್ಯನು ರಾಜಕುಮಾರಿಯನ್ನು ವಿವಾಹವಾಗುವುದರ ಮೂಲಕ ವೈವಾಹಿಕ ಸಂಬಂಧವನ್ನು ಬೆಳೆಸಿದನು. ಇದರ ನಂತರ ಈ ಪ್ರಾಂತ್ಯದಲ್ಲಿ ಪಶ್ಚಿಮ ಚಾಳುಕ್ಯರು ಪ್ರಬಲರಾದರು.[೩೫]

### ೨.೩.೩. ನೊಳಂಬ ಪಲ್ಲವರು (ಕ್ರಿ. ಶ. ೭೪೦–೧೦೫೪)

ಆಗ್ನೇಯ ಕರ್ನಾಟಕದಲ್ಲಿ ಕ್ರಿ. ಶ. ೮ನೇ ಶತಮಾನದಿಂದ ೧೧ನೇ ಶತಮಾನದವರೆಗೆ ಆಳ್ವಿಕೆ ನಡೆಸಿದ ನೊಳಂಬರು ಅಥವಾ ನೊಳಂಬ ಪಲ್ಲವರು ದಕ್ಷಿಣ ಭಾರತದ ಇತಿಹಾಸದಲ್ಲಿ ಬಹುಮುಖ್ಯ ಪಾತ್ರವಹಿಸಿದ್ದರು. ಅಲ್ಲದೆ ಕರ್ನಾಟಕದ ಭವ್ಯ ಇತಿಹಾಸ ಪರಂಪರೆಗೆ ಭದ್ರ ಬುನಾದಿಯನ್ನು ಹಾಕಿದವರೊಲ್ಲಬ್ಬರಾದರು.[೩೬]

ಮಂಗಳ (ಕ್ರಿ. ಶ.೭೪೦–೭೭೫)–ನಿಡುಗಲ್ಲು ಪ್ರದೇಶದಲ್ಲಿ ಈತನ ಆಳ್ವಿಕೆಗೆ ಸಂಬಂಧಿಸಿದಂತೆ ಯಾವುದೇ ಶಾಸನ ದೊರೆಯದಿದ್ದರೂ ನೊಳಂಬರ ರಾಜಧಾನಿ ಹೇಮಾವತಿಗೆ ನಿಡುಗಲ್ಲು ಬಹಳ ಹತ್ತಿರವಿದ್ದಿದರಿಂದ ಇವರ ಆಳ್ವಿಕೆಗೆ ಒಳಪಟ್ಟಿತ್ತು ಎಂದು ಊಹಿಸಬಹುದಾಗಿದೆ.

ಸಿಂಹಪೋತ (ಕ್ರಿ. ಶ. ೭೭೫–೮೦೦) ಈತನು ಆಡಳಿತದ ಅನುಕೂಲಕ್ಕಾಗಿ ಗಂಗರ ಸಾಮಂತನಾಗಿ ಮುಂದುವರೆದನು ಎಂದು ಚಳ್ಳಕೆರೆ ಶಾಸನದಲ್ಲಿ ಉಲ್ಲೇಖಗೊಂಡಿದೆ.[೩೭] ಚಾರುಪೊನ್ನೇರನು (ಕ್ರಿ. ಶ. ೮೦೦–೮೩೦) ನೊಳಂಬರ ಹೆಸರುಳ್ಳ ಪ್ರದೇಶವನ್ನು ಆಳ್ವಿಕೆ ಮಾಡಿದ ಬಗ್ಗೆ ಮೊದಲ ಬಾರಿಗೆ ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಈತನು ಆಡಳಿತದ ಅನುಕೂಲಕ್ಕಾಗಿ ಕೆಲವು ಕಾಲ ಗಂಗರಿಗೂ, ರಾಷ್ಟ್ರಕೂಟರಿಗೂ ನಿಷ್ಠೆಯಿಂದ ಇದ್ದನು. ಒಂದನೇ ಪೊಳಲ್ಚೋರ (ಕ್ರಿ. ಶ. ೮೩೦–೮೭೦)ನು ನೊಳಂಬರ ಸಮರ್ಥ ದೊರೆಗಳಲ್ಲಿ ಒಬ್ಬನಾಗಿದ್ದು, ವಿಶಾಲ ರಾಜ್ಯವನ್ನು ಗೆದ್ದು ತನ್ನ ಆಡಳಿತಕ್ಕೆ ಒಳಪಡಿಸಿಕೊಂಡನು. ಗಂಗರ ಬೆಂಬಲದಿಂದ ಪಲ್ಲವರ ಮೇರೆಯವರೆಗೂ ತನ್ನ ಎಲ್ಲೆಯನ್ನು ವಿಸ್ತರಿಸಿದ. ಈ ಬಗ್ಗೆ ಹಿಂದೂಪುರ ಮತ್ತು ಕಂಬದೂರು ಶಾಸನಗಳಲ್ಲಿ ಉಲ್ಲೇಖವಾಗಿದೆ.[೩೮]

ನೊಳಂಬಾಧಿ ರಾಜ ಮಹೇಂದ್ರ (ಕ್ರಿ. ಶ. ೮೭೦–೮೯೭) ಮಹತ್ವಾಕಾಂಕ್ಷಿ ದೊರೆಯಾಗಿದ್ದನು. ಹಲವು ಯುದ್ಧಗಳನ್ನು ಮಾಡಿ ನೊಳಂಬ ರಾಜ್ಯವನ್ನು ದಕ್ಷಿಣದಲ್ಲಿ ಧರ್ಮಪುರಿ, ನೈರುತ್ಯದಲ್ಲಿ ಮಂಡ್ಯ ಜಿಲ್ಲೆಯ ತಾಯಲೂರು, ಪೂರ್ವದಲ್ಲಿ ಚಿತ್ತೂರು, ಉತ್ತರದಲ್ಲಿ ಬಳ್ಳಾರಿ ಜಿಲ್ಲೆ,

ಪಶ್ಚಿಮದಲ್ಲಿ ತುಮಕೂರು ಜಿಲ್ಲೆಗಳನ್ನು ಒಳಗೊಂಡ ನೊಳಂಬವಾಡಿ-೩೨೦೦೦ ಎಂಬ ವಿಸ್ತಾರ ಪ್ರಾಂತ್ಯವನ್ನು ಆಳ್ವಿಕೆ ಮಾಡಿದನು.[೫೯] ಇವನ ಆಳ್ವಿಕೆಯ ಕಾಲಕ್ಕೆ ನಿಡುಗಲ್ಲು ಒಂದು ಪ್ರಮುಖ ನಗರವಾಗಿತ್ತು. ಕ್ರಿ. ಶ. ೮೭೮ರಲ್ಲಿ 'ಬಿದಿಯ ಚೋರರಸ'ನು ಮಹೇಂದ್ರನ ಸಾಮಂತನಾಗಿ ಇಲ್ಲಿ ಆಳ್ವಿಕೆ ಮಾಡಿದನು.[೬೦] ಒಂದನೇ ಅಯ್ಯಪ್ಪದೇವ (ಕ್ರಿ. ಶ. ೮೯೭-೯೩೪) ನೊಳಂಬ ರಾಜರಲ್ಲೇ ಪ್ರಬಲನಾಗಿದ್ದು ವಿಶಾಲ ರಾಜ್ಯವನ್ನು ಹೊಂದಿದ್ದ ರಾಜನಾಗಿದ್ದಾನೆ. ಗಂಗರು, ರಾಷ್ಟ್ರಕೂಟರು, ಕಲ್ಯಾಣ ಚಾಳುಕ್ಯರೊಂದಿಗೆ ಯುದ್ಧ ಮತ್ತು ವೈವಾಹಿಕ ಸಂಬಂಧಗಳನ್ನು ಬೆಳೆಸಿ ಕೊನೆಗೆ ಚಾಳುಕ್ಯರ ಎರಡನೇ ಭೀಮನಿಂದ ಯುದ್ಧದಲ್ಲಿ ಹತನಾದನು. ಬೀರನೊಳಂಬ ಅಣ್ಣಿಗ (ಕ್ರಿ. ಶ. ೯೩೪-೯೪೦)ನ ಕಾಲದಲ್ಲಿ ರಾಜ್ಯವು ಸುಖ, ಶಾಂತಿಯಿಂದ ಇದ್ದು ಯಾವುದೇ ಕದನಗಳು ನಡೆದಿಲ್ಲ ಎಂದು ಕ್ರಿ. ಶ. ೯೩೬ರ ಮಡಕಶಿರಾ ಶಾಸನವು ಉಲ್ಲೇಖಿಸುತ್ತದೆ.

ಇರಿವನೊಳಂಬದಿಲೀಪ (ಕ್ರಿ. ಶ. ೯೪೧-೯೬೭) ಅಣ್ಣಿಗನ ಮಗ ಹಾಗೂ ಇರುಳನ ಸೋದರಳಿಯನಾಗಿರಬೇಕೆಂದು ಊಹಿಸಲಾಗಿದೆ.[೬೧] ಗಂಗರಾಜ ಬೂತುಗನ ಮಗ ಮಾರಸಿಂಹ ಮತ್ತು ರಾಷ್ಟ್ರಕೂಟರೊಂದಿಗೆ ಕ್ರಿ. ಶ. ೯೪೮ರಲ್ಲಿ ಚೋಳರ ಮೇಲೆ ಯುದ್ಧ ಮಾಡಿದನೆಂದು ಕ್ರಿ. ಶ. ೯೬೧ರ ಮಡಕಶಿರಾ ಶಾಸನ ಉಲ್ಲೇಖಿಸಿದೆ. ಕೊನೆಗೆ ಗಂಗರ ಮಾರಸಿಂಹನಿಂದ ೯೬೭ರಲ್ಲಿ ಹತನಾದನು.[೬೨] ನನ್ನಿ ನೊಳಂಬ (ಕ್ರಿ. ಶ. ೯೬೮-೯೭೧)ನ ಕಾಲದಲ್ಲಿ ಗಂಗರ ಎರಡನೇ ಮಾರಸಿಂಹನು ಇವನ ಸಂಸ್ಥಾನದ ಮೇಲೆ ದಾಳಿ ಮಾಡಿ ನೊಳಂಬರಿಗೆ ನೆಲೆಯಿಲ್ಲದಂತೆ ಮಾಡಿದನೆಂದು ಶ್ರವಣಬೆಳಗೊಳ ಶಾಸನ ತಿಳಿಸುತ್ತದೆ. ಎರಡನೇ ಪೊಳಲ್ಚೋರ (ಕ್ರಿ. ಶ. ೯೬೫)ನ ಬಗ್ಗೆ ಕಂಬದೂರು ಶಾಸನ ಮಾತ್ರ ಉಲ್ಲೇಖಿಸುತ್ತದೆ. ಗಂಗರ ಮಾರಸಿಂಹನ ದಾಳಿಯಿಂದ ಇವನು ಯುದ್ಧದಲ್ಲಿ ಮಡಿದಿರಬಹುದೆಂದು ಊಹಿಸಲಾಗಿದೆ.[೬೩]

ಗಂಗ ಮಾರಸಿಂಹನ ದಾಳಿಯಿಂದ ಬಳ್ಳಾರಿಗೆ ಪಲಾಯನ ಮಾಡಿದ್ದ ನೊಳಂಬರು ಎರಡನೇ ಮಹೇಂದ್ರನ ನೇತೃತ್ವದಲ್ಲಿ ಮಾರಸಿಂಹನ ಮರಣದ ನಂತರ ಹೇಮಾವತಿಯನ್ನು ವಶಪಡಿಸಿಕೊಂಡರು. ನಂತರ ಚೋಳರ ಮೇಲೆ ದಾಳಿಮಾಡಿ ಅವರನ್ನು ಸೋಲಿಸಿದರೆಂದು ಬಳ್ಳಾರಿಯ ಕುರುಗೋಡು ಶಾಸನ ಉಲ್ಲೇಖಿಸಿದೆ.[೬೪] ಇವನ ನಂತರ ಜಗದೇಕಮಲ್ಲ ನೊಳಂಬ ಪಲ್ಲವ ಪೆರ್ಮಾನಡಿ ಉದಯಾದಿತ್ಯನು (ಕ್ರಿ. ಶ. ೧೦೧೮-೧೦೩೭) ಕಲ್ಯಾಣ ಚಾಳುಕ್ಯರ ನೆರವಿನಿಂದ ನೊಳಂಬವಾಡಿ ೩೨೦೦೦ ಪ್ರಾಂತ್ಯವನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಂಡಿದ್ದನು. ಚೋಳರ ಗಡಿಪ್ರದೇಶವು ಹೇಮಾವತಿಗೆ ಹತ್ತಿರವಿದ್ದರಿಂದ ರಾಜಧಾನಿಯನ್ನು ಕಂಪ್ಲಿಗೆ ಸ್ಥಳಾಂತರಿಸಿದನು.[೬೫] ನೊಳಂಬ ಪಲ್ಲವರ ಕೊನೆಯ ಅರಸ ತ್ರೈಲೋಕ್ಯಮಲ್ಲ ನನ್ನಿನೊಳಂಬ ಪಲ್ಲವ ಪೆರ್ಮಾನಡಿ ಅಸಮರ್ಥನಾಗಿದ್ದರಿಂದ ನಿಡುಗಲ್ಲು ಪ್ರಾಂತ್ಯ ಕ್ರಿ. ಶ. ೧೦೫೪ರ ವೇಳೆಗೆ ಸ್ವತಂತ್ರಗೊಂಡಿತು.[೬೬]


ನೊಳಂಬ ಪಲ್ಲವರ ವಂಶವೃಕ್ಷ
ತ್ರಿನಯನ ಪಲ್ಲವ
ಮಂಗಳ ನೊಳಂಬಾದಿರಾಜ
ಸಿಂಹಪೋತ (ಸು.ಕ್ರಿ.ಶ. ೭೫೦–೭೭೫)
ಚಾರುಪೊನ್ನೇರ (ಪಲ್ಲವಾಧಿರಾಜ) (ಸು.ಕ್ರಿ.ಶ. ೭೭೫–೮೦೦)
ಪಲ್ಲವಮಲ್ಲ
ಪೊಳಾಳಚೋರ ನೊಳಂಬ (ಕ್ರಿ.ಶ.೮೦೦–೮೬೦)
ಮಹೇಂದ್ರ ೧
ಇರಿವನೊಳಂಬ
ನೊಳಂಬಾಧಿರಾಜನೊಳಿಪಯ್ಯ (ಕ್ರಿ.ಶ.೮೯೫–೯೧೯)
ಅಯ್ಯಪ್ಪದೇವ (ಕ್ರಿ.ಶ. ೯೧೯–೯೨೫)
ಅಂಕಯ್ಯ
ಅಣ್ಣಿಗ (ಸು.ಕ್ರಿ.ಶ. ೯೨೫–೯೪೦)
ಏಕವಾಕ್ಯಣಇರಿವ ನೊಳಂಬದಿಲೀಪ
(ಇರಿವನೊಳಂಬ ನೊಳಿಪಯ್ಯ) (ಸು. ಕ್ರಿ.ಶ. ೯೪೦–೯೬೭)
ಇರುಳಚೋರ (ಕ್ರಿ.ಶ. ೯೨೬)ನು
ತಂದೆಯ ಜೊತೆ ಸಂಯುಕ್ತ ಆಳ್ವಿಕೆ
ನನ್ನಿನೊಳಂಬ (ಕ್ರಿ.ಶ. ೯೬೭–೯೭೦)
ಅಯ್ಯಪ್ಪ
ಪೊಳಾಳಚೋರ-೨
ವೀರಮಹೇಂದ್ರ-೨ (ಸು. ಕ್ರಿ.ಶ. ೯೭೬–೯೮೦)
ವಲ್ಯದೇವ (ಏಕವಾಕ್ಯ) (ಸು.ಕ್ರಿ.ಶ. ೯೮೦–೧೦೦೫)
ಇರಿವನೊಳಂಬ (ಘಟಿಯಂಕಕಾರ)
(ಸು.ಕ್ರಿ.ಶ.೧೦೦೫–೧೦೨೫)
ಉದಯಾದಿತ್ಯ (ಜಗದೇಕಮಲ್ಲನೊಳಂಬ)
(ಸು.ಕ್ರಿ.ಶ.೧೦೨೫–೧೦೩೯)
ಜಗದೇಕಮಲ್ಲ ಇರುಮಡಿನೊಳಂಬ
(೧೦೩೭ ತಂದೆಯ ಜೊತೆ ಸಂಯುಕ್ತ ಆಳ್ವಿಕೆ)
ತ್ರೈಲೋಕ್ಯಮಲ್ಲನನ್ನಿನೊಳಂಬ

### ೨.೩.೪. ಮಾನ್ಯಖೇಟ ರಾಷ್ಟ್ರಕೂಟರು:

ರಾಷ್ಟ್ರಕೂಟರು ಬಾದಾಮಿ ಚಾಳುಕ್ಯರ ನಂತರ ಕ್ರಿ. ಶ. ೮ ನೇಯ ಶತಮಾನದಿಂದ ಕ್ರಿ. ಶ.೧೦ನೇ ಶತಮಾನದವರೆಗೆ ಕರ್ನಾಟಕದ ರಾಜಕೀಯದಲ್ಲಿ ಮಾತ್ರವಲ್ಲದೆ, ಭಾರತದ ರಾಜಕೀಯ ಚಟುವಟಿಕೆಗಳಲ್ಲೂ ಮಹತ್ತರ ಪಾತ್ರವನ್ನು ನಿರ್ವಹಿಸಿದರು. ಡಾ.ಎಸ್. ನೀಲಕಂಠ ಶಾಸ್ತ್ರೀಯವರು "ಭಾರತದ ಭವಿಷ್ಯದ ಮೇಲೆ ಕರ್ನಾಟಕ ಪರಿಣಾಮ ಬೀರಿದ ಕಾಲವೇನಾದರೂ ಇದ್ದಲ್ಲಿ ಅದು ಕ್ರಿ. ಶ. ೮ ರಿಂದ ೧೦ನೇ ಶತಮಾನಗಳಲ್ಲಿ ಆಳ್ವಿಕೆ ಮಾಡಿದ ರಾಷ್ಟ್ರಕೂಟರ ಕಾಲ" ಎಂದಿದ್ದಾರೆ.

ಒಂದನೇ ಕೃಷ್ಣ ಗಂಗರ ಶ್ರೀಪುರುಷನ ಮೇಲೆ ಆಕ್ರಮಣವೆಸಗಿ ತನ್ನ ಸಾರ್ವಭೌಮತ್ವ ಒಪ್ಪಿಕೊಳ್ಳುವಂತೆ ಮಾಡಿದನು.[೮] ಇವನ ನಂತರ ಧ್ರುವನು (ಕ್ರಿ. ಶ.೭೮೦–೭೯೩) ಗಂಗರ ಅರಸ ಶಿವಮಾರನನ್ನು ಸೋಲಿಸಿ ಗಂಗವಾಡಿಯನ್ನು ಆಕ್ರಮಿಸಿಕೊಂಡು ತನ್ನ ಮಗ ಸ್ತಂಭ (ಕಂಬ)ನನ್ನು ಗಂಗವಾಡಿಯ ನಿರ್ವಹಣೆಗಾಗಿ ನೇಮಿಸಿದನು. ಈ ಸಮಯದಲ್ಲಿ ನಿಡುಗಲ್ಲು ಪ್ರದೇಶವನ್ನು ಆಳುತ್ತಿದ್ದ ನೊಳಂಬರ ಸ್ಥಿತಿಯೇನಾಯಿತೆಂದು ತಿಳಿಯದಿದ್ದರೂ ನೊಳಂಬರೂ ಕೂಡ ರಾಷ್ಟ್ರಕೂಟರ ಸಾರ್ವಭೌಮತ್ವವನ್ನು ಅಂಗೀಕರಿಸಿದರೆಂದು ಹೇಳಬಹುದು.[೯] ರಾಷ್ಟ್ರಕೂಟರ ಅರಸ ಮೂರನೇ ಗೋವಿಂದನು (ಕ್ರಿ. ಶ. ೭೯೩–೮೧೪) ಗಂಗರ ಅರಸ ಶಿವಮಾರನ ದಂಗೆಯನ್ನು ಅಡಗಿಸಿ ಸ್ತಂಭನಿಂದ ಗಂಗವಾಡಿ ಪ್ರಾಂತ್ಯವನ್ನು ವಶಪಡಿಸಿಕೊಂಡು. ಆಗ ನೊಳಂಬರ ಚಾರುಪೊನ್ನೆರ ಮೂರನೇ ಗೋವಿಂದನ ಸಾಮಂತನಾಗಿ ಮುಂದುವರೆದನು. ಇವನ ನಂತರ ರಾಷ್ಟ್ರಕೂಟ ಅರಸರಲ್ಲಾದ ಬಿಕ್ಕಟ್ಟಿನಿಂದ ನೊಳಂಬ ಪಲ್ಲವರು ಗಂಗರ ಸಾಮಂತರಾಗಿ ನಿಷ್ಠೆಯಿಂದ ಇದ್ದರು. ಮೂರನೇ ಇಂದ್ರನು ತನ್ನ ಕೊನೇ ಕಾಲದಲ್ಲಿ ಸಲ್ಲೇಖನ ವ್ರತ ಕೈಗೊಂಡು ಶ್ರವಣಬೆಳಗೋಳದಲ್ಲಿ ಮರಣ ಹೊಂದಿದನು ಎಂದು ಇತ್ತೀಚೆಗೆ ದೊರೆತ ಹೇಮಾವತಿ ಶಾಸನ ಉಲ್ಲೇಖಿಸುತ್ತದೆ.[೨೦] ಇದರಿಂದ ನೊಳಂಬ ಪಲ್ಲವರು ಈತನ ಸಾಮಂತರಾಗಿದ್ದರು ಎಂದು ತಿಳಿಯಬಹುದು. ಮೂರನೇ ಕೃಷ್ಣ (ಕ್ರಿ. ಶ. ೯೩೯–೯೬೭) ಅಣ್ಣಿಗ ನೊಳಂಬನ ಮೇಲೆ ಹಲವು ಯುದ್ಧಗಳಲ್ಲಿ ವಿಜಯಿಯಾದನೆಂದು ಕ್ರಿ. ಶ. ೯೪೦ರ ದಿಯೋಲಿ ಶಾಸನ ಉಲ್ಲೇಖಿಸುತ್ತದೆ.[೨೧] ಇವನ ನಂತರ ಬಂದ ರಾಷ್ಟ್ರಕೂಟರ ಅರಸರು ಅಸಮರ್ಥರಾಗಿದ್ದರಿಂದ ನಿಡುಗಲ್ಲು ಪ್ರಾಂತ್ಯವು ಅವರ ಕೈತಪ್ಪಿತು.

### ೨.೩.೫. ಕಲ್ಯಾಣ ಚಾಳುಕ್ಯರು

ರಾಷ್ಟ್ರಕೂಟರ ಅವನತಿಯ ನಂತರ ಚಾಳುಕ್ಯರು ಪುನಃ ರಾಜಕೀಯ ರಂಗವನ್ನು ಪ್ರವೇಶಿಸಿದರು. ಒಂದು ರಾಜವಂಶ ಆಳಿ ಅಳಿದು ಸುಮಾರು ಎರಡು ಶತಮಾನಗಳ ನಂತರ ಮರಳಿ ಅಧಿಕಾರಕ್ಕೆ ಬಂದ ಉದಾಹರಣೆಗೆ ಇವರು ಮೊದಲನೆಯವರು.[೨೨]

ಎರಡನೇ ತೈಲಪ (ಕ್ರಿ. ಶ. ೯೭೩-೯೯೭)ನು ಕ್ರಿ. ಶ. ೯೯೨ರಲ್ಲಿ ನಡೆದ ಚೋಳರ ದಾಳಿಯವರೆಗೆ ನೊಳಂಬವಾಡಿ ಈತನ ಅಧೀನದಲ್ಲಿತ್ತು. ನೊಳಂಬರ ಎರಡನೇ ಮಹೇಂದ್ರನು ತೈಲನೊಂದಿಗೆ ಸುಮಾರು ೯೮೦ರಲ್ಲಿ ಚೋಳರ ಮೇಲೆ ದಾಳಿ ಮಾಡಿದ ಎಂಬುದಕ್ಕೆ ಶಾಸನಾಧಾರವಿದೆ. ಅನಂತರ ನೋಳಂಬರು ಕಲ್ಯಾಣ ಚಾಳುಕ್ಯರ ಸ್ನೇಹ ಸಂಪಾದಿಸಿ ಅವರ ಆಸರೆಯಲ್ಲಿ ಕೆಲಕಾಲ ತಂಗಿದ್ದರೆಂಬುದಕ್ಕೆ ಹಲವು ನಿದರ್ಶನಗಳಿವೆ.[೫೩] ಸತ್ಯಾಶ್ರಯನೊಂದಿಗೆ (ಕ್ರಿ. ಶ. ೯೯೭-೧೦೦೮) ನೊಳಂಬ ಪಲ್ಲವರ ವೀರಪಾಂಡ್ಯ ಇರುಂಗೊಳದೇವನು ಸ್ನೇಹ ಬೆಳೆಸಿ ಸಾಮಂತನಾದನು. ಇವನ ಪ್ರಾಬಲ್ಯ ಮೆಚ್ಚಿದ ಚಾಳುಕ್ಯ ಚಕ್ರವರ್ತಿ ಸತ್ಯಾಶ್ರಯನು ರೊದ್ದ-೩೦೦, ಸೀರೆ-೩೦೦, ಹರುವೆ-೩೦೦, ಸಿಂಧವಾಡಿ-೧೦೦೦, ನೊಳಂಬವಾಡಿಗಳನ್ನು ನೀಡಿ ಮಹಾಮಾಂಡಲೀಪತಿಯ ನ್ನಾಗಿಸಿದನು.[೫೪]

ನಿಡುಗಲ್ಲು ಚೋಳರ ಬ್ರಹ್ಮದೇವನ ಶಾಸನ ಸಿರಾದಲ್ಲಿ ದೊರೆತಿದ್ದು, ಈ ಶಾಸನದಲ್ಲಿ ಕಲ್ಯಾಣ ಚಾಳುಕ್ಯರ ಮೊದಲನೆ ಜಗದೇಕಮಲ್ಲನ ಹೆಸರು ಉಲ್ಲೇಖಗೊಂಡಿದೆ.[೫೫] ಆದ್ದರಿಂದ ನಿಡುಗಲ್ಲು ಪ್ರಾಂತ್ಯವು ಜಗದೇಕ ಮಲ್ಲನ ನಿಯಂತ್ರಣದಲ್ಲಿತ್ತು ಎಂದು ಊಹಿಸಬಹುದು. ಆರನೇ ವಿಕ್ರಮಾದಿತ್ಯ (ಕ್ರಿ. ಶ. ೧೦೭೬-೧೧೨೭)ನ ಕ್ರಿ. ಶ. ೧೦೭೪ರ 'ಹೌಅಲಗಿ'ಯ ಶಾಸನದಲ್ಲಿ ನಿಡುಗಲ್ಲು ಚೋಳರಸ ಮಂಗರಸನ ಬಗ್ಗೆ ಬಿರುದಾವಳಿಗಳಿಂದ ಹೊಗಳಿದ್ದಾನೆ. ಆದ ಕಾರಣ ಈ ಪ್ರದೇಶ ವಿಕ್ರಮಾದಿತ್ಯನ ನಿಯಂತ್ರಣದಲ್ಲಿತ್ತು ಎಂದು ತಿಳಿಯಬಹುದಾಗಿದೆ. ನಂತರದ ನಿಡುಗಲ್ಲು ಅರಸನಾದ ಬೀಚಿ, ಗೋವಿಂದರಸ, ಮೊದಲನೇ ಇರುಂಗೋಳದೇವ ಆರನೇ ವಿಕ್ರಮಾದಿತ್ಯನ ಸಾಮಂತರಾಗಿ ಆಳ್ವಿಕೆ ನಡೆಸಿದರು.

ಮೂರನೇ ಸೋಮೇಶ್ವರ (ಕ್ರಿ. ಶ. ೧೧೨೭-೧೧೩೯)ನ - ಕ್ರಿ. ಶ. ೧೧೨೭ರ ಶಾಸನ ಹೇಳುವಂತೆ ಮುಮ್ಮಡಿಸೋಮೇಶ್ವರನ ಕಾಲದಲ್ಲಿ ನಿಡುಗಲ್ಲು ಚೋಳ ಅರಸನು ಕಣಿಯಕಲ್-೩೦೦, ರೊದ್ದ-೩೦೦ ಸಿರಾ-೩೦೦, ಹರವೆ-೩೦೦, ಸಿಂದವಾಡಿ-೧೦೦೦, ಸಾಸಿರಗಳ ಅಧಿಪತಿಯಾಗಿದ್ದನು ಎಂದು ಉಲ್ಲೇಖಿಸಿದೆ. ಇವರ ನಂತರ ಇಮ್ಮಡಿ ಜಗದೇಕ ಮಲ್ಲ ಮತ್ತು ಮೂರನೇ ತೈಲನ ಸಾಮಂತರಾಗಿ ನಿಡುಗಲ್ಲು ಪ್ರದೇಶವನ್ನು ಮೊದಲನೇ ಇರುಂಗೋಳ ಮತ್ತು ಮಲ್ಲಿದೇವ ಆಳ್ವಿಕೆ ಮಾಡುತ್ತಿದ್ದರು. ಕಲ್ಯಾಣ ಚಾಳುಕ್ಯರ ನಂತರ ಈ ಪ್ರಾಂತ್ಯದ ಮೇಲೆ ಹೊಯ್ಸಳರು ತಮ್ಮ ಅಧಿಪತ್ಯವನ್ನು ಸ್ಥಾಪಿಸಿದರು.[೫೬]

**೨.೩.೬. ಹೊಯ್ಸಳರು:**

ಕಲ್ಯಾಣದ ಚಾಳುಕ್ಯರು ಮತ್ತು ವಿಜಯನಗರ ಸಾಮ್ರಾಜ್ಯದ ನಡುವಣ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಪ್ರಬಲ ರಾಜವಂಶ. ಮುಖ್ಯವಾಗಿ ಕರ್ನಾಟಕದ ಮಧ್ಯಕಾಲೀನ ಇತಿಹಾಸದ

ಭವ್ಯ ಅಧ್ಯಾಯ ಹೊಯ್ಸಳರದ್ದು, ಅವರು ಕಲ್ಯಾಣದ ಚಾಳುಕ್ಯರ ಸಾಮಂತರಾಗಿ, ಅವರ ಪತನದ ನಂತರ ಸ್ವಾತಂತ್ರ್ಯ ಘೋಷಿಸಿ, ಇತಿಹಾಸದಲ್ಲಿ ಇಂದಿಗೂ ಭವ್ಯ ಸ್ಥಾನ ಪಡೆದುಕೊಂಡಿದ್ದಾರೆ. ಕ್ರಿ ಶ. ೯೮೦ರ ಒಂದು ಶಾಸನದಲ್ಲಿ ಅರಕೆಲ್ಲನ ಮೊಮ್ಮಗ ಪೊಯ್‌ಸಳ ಮಾರುಗ ತನ್ನ ಸಮಕಾಲೀನ ನೊಳಂಬ ಅಣ್ಣಿಗನೊಂದಿಗೆ ಸಿರಿವೂರು ಎಂಬಲ್ಲಿ ಯುದ್ಧ ಮಾಡಿದರ ಬಗ್ಗೆ ಉಲ್ಲೇಖವಿದೆ.[೫೭]

ವಿಷ್ಣುವರ್ಧನ (ಕ್ರಿ ಶ. ೧೧೦೬–೧೧೫೨)ನು ಪಟ್ಟಕ್ಕೆ ಬಂದ ಮೇಲೆ ರಾಜ್ಯ ವಿಸ್ತರಣಾ ಕಾರ್ಯ ಕೈಗೊಂಡನು. ಇವನ ಸಮಕಾಲೀನವಾಗಿ ಇರುಂಗೋಳ ಚೋಳನು ನಿಡುಗಲ್ಲು ಪ್ರಾಂತ್ಯವನ್ನು ಆಳ್ವಿಕೆ ಮಾಡುತ್ತಿದ್ದನು. ಅಲ್ಲದೆ ಕೋಲಾರ ಘನದುರ್ಗರೊದ್ದಂ ಮುಖಾಂತರ ನಿಡುಗಲ್ಲು ಚೋಳರ ಅರಸ ಇರುಂಗೋಳನನ್ನು ಎದುರಿಸಿ ನಿಡುಗಲ್ಲು ದುರ್ಗವನ್ನು ವಶಪಡಿಸಿಕೊಂಡು ಡಕ್ಕರಸ ಎಂಬ ದಳವಾಯಿಯನ್ನು ನಿಡುಗಲ್ಲಿನ ಅಧಿಕಾರಿಯನ್ನಾಗಿ ನೇಮಿಸಿದನು.[೫೮] ಒಂದನೇ ನರಸಿಂಹ (ಕ್ರಿ ಶ. ೧೧೫೨–೧೧೭೩)ನು ತನ್ನ ಮಗಳಾದ ಸಿರಿಯ ದೇವಿಯನ್ನು ನಿಡುಗಲ್ಲು ಚೋಳ ಅರಸ ಇಮ್ಮಡಿಇರುಂಗೋಳನಿಗೆ ಕೊಟ್ಟು ವೈವಾಹಿಕ ಸಂಬಂಧ ಏರ್ಪಡಿಸಿಕೊಂಡು ನಿಡುಗಲ್ಲು ಚೋಳರೊಂದಿಗೆ ಸ್ನೇಹವನ್ನು ಸಂಪಾದಿಸಿದನು. ನಿಡುಗಲ್ಲು ಚೋಳ ಅರಸ ಇರುಂಗೋಳನಿಗೂ ಹೊಯ್ಸಳ ಮುಮ್ಮಡಿ ನರಸಿಂಹನಿಗೂ (ಕ್ರಿ ಶ. ೧೨೫೪–೧೨೯೧) ನಡೆದ ಎರಡು ಬೇರೆ ಬೇರೆ ಕಾಳಗದ ವಿವರಗಳು ತುಮಕೂರು ಮತ್ತು ಕಾಟಿಕೇರಿ ಶಾಸನಗಳಿಂದ ತಿಳಿದುಬಂದಿದೆ. ಇವನ ನಂತರ ಅಧಿಕಾರಕ್ಕೆ ಬಂದ ನಿಡುಗಲ್ಲು ಚೋಳ ಅರಸ ಪೆರುಮಾಳ ದೇವನಿಗೂ ಹೊಯ್ಸಳರ ಅಧಿಕಾರಿ ಬಮ್ಮರಸನಿಗೂ ನಡೆದ ಕಾಳಗದಲ್ಲಿ ಪೆರುಮಾಳದೇವ ಮತ್ತು ತನ್ನ ಮಹಾಪ್ರಧಾನಿ ಕೇಶವ ರಾಮಯ್ಯ ಹತರಾದದರು. ಇದರಿಂದ ಈ ಪ್ರಾಂತ್ಯದಲ್ಲಿ ಹೊಯ್ಸಳರ ಪ್ರಾಬಲ್ಯ ಹೆಚ್ಚಿತು. ಅಲ್ಲದೇ ಕ್ರಿ ಶ. ೧೨೮೬ರ ವೇಳೆಗೆ ಹೊಯ್ಸಳರು ನಿಡುಗಲ್ಲನ್ನು ಸಂಪೂರ್ಣವಾಗಿ ವಶಪಡಿಸಿಕೊಂಡರು. ಕೊನೆಗೆ ಮುಮ್ಮಡಿ ಬಲ್ಲಾಳನು ನಿಡುಗಲ್ಲು ಪ್ರಾಂತ್ಯವನ್ನು ನಾಯಕ ಮನೆತನದವರಿಗೆ ಹಿಂದಿರುಗಿಸಿರಬಹುದೆಂದು ದೊಡ್ಡ ಬಾಣಗೆರೆಯ ಶಾಸನದಿಂದ ತಿಳಿಯಬಹುದು.[೫೯] ಏಕೆಂದರೆ ೧೨೮೬ರ ನಂತರದ ಕಾಲಕ್ಕೆ ಸಂಬಂಧಿಸಿದ ಹೊಯ್ಸಳರ ಯಾವುದೇ ಶಾಸನ ನಿಡುಗಲ್ಲು ಪರಿಸರದ ಕುರಿತು ಉಲ್ಲೇಖ ಮಾಡಿರುವುದರ ಬಗ್ಗೆ ಆಧಾರಗಳು ದೊರೆತಿಲ್ಲ.

### ೨.೭.೭. ನಿಡುಗಲ್ಲು ಚೋಳರು:

ಕ್ರಿ ಶ.೧೧ನೇ ಶತಮಾನದ ಪ್ರಾರಂಭದಿಂದ ೧೩ನೇ ಶತಮಾನದ ಅಂತ್ಯದವರೆಗೆ ಸುಮಾರು ಮೂರು ಶತಮಾನಗಳ ಕಾಲ ಚೋಳರೆಂದು ಕರೆಸಿಕೊಳ್ಳುತ್ತಿದ್ದ ಅರಸು ಮನೆತನವಾದ ನಿಡುಗಲ್ಲು ಚೋಳರು ಕರ್ನಾಟಕದ ದಕ್ಷಿಣ ಪೂರ್ವಭಾಗ ಮತ್ತು ಆಂಧ್ರಪ್ರದೇಶದ ಪಶ್ಚಿಮ

ಭಾಗದಲ್ಲಿ ಪ್ರಭಾವಯುತವಾಗಿ ಆಳ್ವಿಕೆ ನಡೆಸಿದರು. ರೊದ್ದ-೩೦೦, ಕನಿಯಕಲ್ಲು-೩೦೦, ಬಂಗೆಚೇರು-೩೦, ಸಿರೇನಾಡು-೩೦೦, ಸಿಂದವಾಡಿ-೧೦೦೦ ಮತ್ತು ಹರುವೆ-೩೦೦ ಇವು ಇವರ ಆಡಳಿತ ವಿಭಾಗಗಳು. ಕಾರಣಾಂತರಗಳಿಂದ ಬೇರೆ ಬೇರೆ ಕಾಲಾವಧಿಯಲ್ಲಿ ಗೋವಿಂದವಾಡಿ (೧೧ನೇ ಶತಮಾನದ ಪ್ರಾರಂಭದಿಂದ ಕ್ರಿ. ಶ. ೧೧೪೩ರವರೆಗೆ), ಹೆಂಜೇರು (ಕ್ರಿ. ಶ. ೧೧೪೩ ರಿಂದ ಕ್ರಿ. ಶ. ೧೧೯೬ ರವರಗೆ) ಮತ್ತು ನಿಡುಗಲ್ಲು (ಕ್ರಿ. ಶ. ೧೨೧೯ ರಿಂದ ೧೨೮೦ರವರೆಗೆ) ಇವರ ರಾಜಧಾನಿಗಳಾಗಿದ್ದವು.[೬೦]

ಗೋವಿಂದವಾಡಿಯಿಂದ ಆಳಿದ ಚೋಳರು – ಜಟಾ ಚೋಳರ ಮೊದಲ ಅರಸನಾಗಿದ್ದಾನೆ. ಈತನ ಕಾಲಕ್ಕೆ ಸಂಬಂಧಿಸಿದ ಯಾವುದೇ ಶಾಸನ ದೊರೆತಿಲ್ಲ. ಆದರೆ ನಿಡುಗಲ್ಲು ಶಾಸನದಲ್ಲಿರುವ ವಂಶಾವಳಿಯಲ್ಲಿ ಈತನ ಹೆಸರಿದೆ. ಬ್ರಹ್ಮದೇವನು (ಕ್ರಿ. ಶ. ೧೦೧೫ – ೧೦೪೪) ಭೋಗೇಂದ್ರ ಮತ್ತು ಬೋಗಿ ಎಂದು ಶಾಸನಗಳಲ್ಲಿ ಉಲ್ಲೇಖಗೊಂಡಿದ್ದಾನೆ. ಇವನ ಏಕೈಕ ಶಾಸನ ಕ್ವಾರ್‍ಯದಲ್ಲಿದೆ. ಈತ ಕಲ್ಯಾಣ ಚಾಳುಕ್ಯರು ಮತ್ತು ನೊಳಂಬ ಪಲ್ಲವರ ಸಾಮಂತನಾಗಿ ಆಳ್ವಿಕೆ ಮಾಡಿದನು.[೬೧] ನಿಡುಗಲ್ಲು ಶಾಸನದ ಪ್ರಕಾರ ಇವನು ಮಂಗರಸನ ಮಗನೆಂದು ತಿಳಿಯುತ್ತದೆ.[೬೨] ಗೋವಿಂದರಸನ ನಿಡುಗಲ್ಲು ಶಾಸನವೊಂದರಿಂದ ಗೋವಿಂದ ಅರಸನ ಪತ್ನಿ ಮಹಾದೇವಿ ಎಂದು ತಿಳಿದುಬರುತ್ತದೆ. ಇವರ ಮಗನೇ ಮೊದಲನೇ ಇರುಂಗೋಳ. (ಕ್ರಿ. ಶ. ೧೧೦೭–೧೧೪೩) ಇವನಿಗೆ ಸಂಬಂಧಿಸಿದ ಎಂಟು ಶಾಸನಗಳು ದೊರಕಿವೆ. ಇವನು ಕಲ್ಯಾಣ ಚಾಳುಕ್ಯರ ನಿಷ್ಠಾವಂತ ಸಾಮಂತನಾಗಿದ್ದನು.

ಹೊಯ್ಸಳರಿಂದ ನಿಡುಗಲ್ಲು ದುರ್ಗವನ್ನು ರಕ್ಷಿಸಲು ತನ್ತ್ರನಮಣನನ್ನು ನೇಮಿಸಿದ್ದನು. ಈತನ ಪತ್ನಿ ಆಳ್ವೆದೇವಿ ಜೈನ ಧರ್ಮದ ಕೊಂಡುಕುಂದಾನ್ವಯದ ಕಾನೂರ್ಗಣದ ಜೈನ ಪಂಥಕ್ಕೆ ಸೇರಿದ್ದವಳೆಂದು ನಿಡುಗಲ್ಲು ಶಾಸನ ತಿಳಿಸುತ್ತದೆ. ಮಲ್ಲಿದೇವನು (ಕ್ರಿ. ಶ. ೧೧೪೩–೧೧೯೬) ಮೊದಲನೇ ಇರುಂಗೋಳನ ಮಗನಾಗಿದ್ದು, ಗೋವಿಂದವಾಡಿಯಿಂದ ಹೇಮಾವತಿಗೆ ರಾಜಧಾನಿಯನ್ನು ಬದಲಾಯಿಸಿದನು. ಹದಿಮೂರು ಶಾಸನಗಳು ಇವನ ಆಳ್ವಿಕೆಗೆ ಸಂಬಂಧಪಟ್ಟವು ದೊರೆತಿವೆ. ಇವನು ನೋಳಂಬ ಮನೆತನದ ರಾಜಕುಮಾರಿಯ ಮಗನಾಗಿದ್ದರಿಂದ ನೊಳಂಬರಲ್ಲಿ ಗಂಡು ಸಂತಾನವಿಲ್ಲದಿದ್ದಾಗ ನೊಳಂಬರ ರಾಜ್ಯ ಈತನಿಗೆ ಸೇರಿತ್ತು. ಈತನ ಸಾಮ್ರಾಜ್ಯವು ರೊದ್ದನಾಡು, ಕಣಿಯಕಲ್ಲು ನಾಡು, ಸಿರೆನಾಡು, ಹರುವೆ ನಾಡುಗಳನ್ನು ಒಳಗೊಂಡಿತ್ತು. ಶಾಸನಗಳಲ್ಲಿ ಉಲ್ಲೇಖವಾಗಿರುವಂತೆ ಮಲ್ಲಿದೇವನಿಗೆ ಲಕ್ಷ್ಮೀದೇವಿ, ಬಲ್ಲಿದೇವಿ, ಸೀತಾದೇವಿ ಎಂಬ ರಾಣಿಯರಿದ್ದರು.[೬೩] ಮಂಗಳವಾಡ ಶಾಸನವು ಮಲ್ಲಿದೇವನ ಮಗ ಇಮ್ಮಡಿ ಇರುಂಗೋಳ ಎಂದು ಉಲ್ಲೇಖಿಸುತ್ತದೆ.[೬೪]

ನಿಡುಗಲ್ಲಿನಿಂದ ಆಳಿದ ಚೋಳ ಅರಸರು – ಇಮ್ಮಡಿ ಬೊಮ್ಮಿದೇವನಿಗೆ ಸಂಬಂಧಿಸಿದ ಕ್ರಿ. ಶ. ೧೨೧೯ ಮತ್ತು ೧೩ನೇ ಶತಮಾನದ ಎರಡು ಶಾಸನಗಳು ದೊರೆತಿವೆ.[೫೯] ಇವನ ಆಡಳಿತ ವಿಭಾಗಗಳು ರೊದ್ದ, ಸಿರೇನಾಡು, ಮದಯಮ್ಮ ನಾಡು, ಲುಂಕೇನೊರಬ, ನೊಳಂಬವಾಡಿ ಹಾಗೂ ರೇಮಾಡಿ.[೬೦] ಮುಮ್ಮಡಿ ಇರುಂಗೋಳನು (ಕ್ರಿ. ಶ. ೧೨೩೨–೧೨೭೭) ನಿಡುಗಲ್ಲನ್ನು ಆಳ್ವಿಕೆ ಮಾಡುತ್ತಿದ್ದಾಗ ನಿಡುಗಲ್ಲಿಗೆ 'ಕಾಳಂಜನಗಿರಿ' ಎಂಬ ಹೆಸರಿತ್ತು. ಇವನ ಆಶ್ರಯದಲ್ಲಿ ಗಂಗೇಯ ನಾಯಕ ಎಂಬ ಸಾಮಂತಾಧಿಪತಿ ಇದ್ದನು.[೬೧] ಪೆರುಮಾಳದೇವನಿಗೆ (ಕ್ರಿ. ಶ. ೧೨೮೦–೧೨೮೬) ಸಂಬಂಧಿಸಿದ ಒಂದು ಶಾಸನ ನಿಡುಗಲ್ಲಿನಲ್ಲಿದ್ದು, ಹೊಯ್ಸಳರ ಸೇನಾಪತಿ ಬಮ್ಮರಸನ ವಿರುದ್ಧ ಕಾದಾಡುತ್ತ ಮಡಿದನು. ಇವನ ನಂತರ ಬೊಮ್ಮನು ಬೈಚನೆಂಬ ಸೇನಾಧಿಕಾರಿಯನ್ನು ಹೊಂದಿದ್ದನು ಎಂಬುದು ನಿಡುಗಲ್ಲು ಶಾಸನದಲ್ಲಿ ಉಲ್ಲೇಖವಾಗಿದೆ.[೬೨] ನಂತರ ಅಧಿಕಾರ ವಹಿಸಿಕೊಂಡ ನಿಡುಗಲ್ಲು ಚೋಳ ಅರಸರಾದ ಗಣೇಶ್ವರದೇವ ಮತ್ತು ಬೊಮ್ಮಿದೇವ–೪ರ ಬಗ್ಗೆ ಕ್ರಿ. ಶ. ೧೨೯೨ರ ಮತ್ತು ೧೩೧೯ರ ಶಾಸನಗಳು ಉಲ್ಲೇಖಿಸುತ್ತವೆ.[೬೩] ಇವರ ನಂತರ ಬಂದ ಅರಸರು ಅಸಮರ್ಥರಾಗಿದ್ದು ನಿಡುಗಲ್ಲು ಚೋಳ ಮನೆತನ ಪತನ ಹೊಂದಿತು.






### ೨.೩.೮. ಕುಮಾರರಾಮನ ವಂಶಸ್ಥರು:

ಕ್ರಿ. ಶ. ೧೨೬೦ರಲ್ಲಿ ನಿಡುಗಲ್ಲು ಚೋಳರ ಆಶ್ರಿತರಾದ ವೇದಾವತಿ ಮತ್ತು ತುಂಗಭದ್ರ ನದಿಗಳ ಮಧ್ಯದಲ್ಲಿ ಮುಮ್ಮಡಿ ಸಿಂಘನಾಯಕ ವಾಸಿಸುತ್ತಿದ್ದನು. ಇವನಿಗೆ ನಿಡುಗಲ್ಲಿನ ದೊರೆಗಳು ನಾಯಕತ್ವ ನೀಡಿ ಆ ಸೀಮೆಯ ದೊರೆಯನ್ನಾಗಿ ಮಾಡಿ ಅವನಿಂದ ಕಪ್ಪ ಪಡೆಯುತ್ತಿದ್ದರು. ಈ ಮುಮ್ಮಡಿ ಸಿಂಘನಾಯಕನ ಮಗ ಕಂಪಿಲರಾಯ ಇವನ ಮಗನೇ ಕುಮಾರರಾಮ.[೬೦]

### ೨.೩.೯. ವಿಜಯನಗರ ಸಾಮ್ರಾಜ್ಯ:

ಕ್ರಿ. ಶ. ೧೪ನೇ ಶತಮಾನದ ಪೂರ್ವಾರ್ಧದಲ್ಲಿ ಸ್ಥಾಪಿತವಾದ ವಿಜಯನಗರ ಸಾಮ್ರಾಜ್ಯ ದಕ್ಷಿಣ ಭಾರತದ ಇತಿಹಾಸದ ಮಹತ್ವಪೂರ್ಣ ಘಟನೆಯಾಗಿದೆ. ಶಕ್ತಿಯುತ ರಾಷ್ಟ್ರಗಳ ವಿರುದ್ಧ ಉಗ್ರ ಹೋರಾಟ ನಡೆಸಿ ಗೆಲುವು ಪಡೆದುದ್ದರ ನೆನಪಿಗಾಗಿ ಈ ರಾಜ್ಯಕ್ಕೆ 'ವಿಜಯನಗರ' ಎಂದು ಹೆಸರಾಯಿತು. ಈ ಸಾಮ್ರಾಜ್ಯ ಕಡೆಯ, ಪ್ರಸಿದ್ಧ ಮತ್ತು ವೈಭವಪೂರ್ಣ ಹಿಂದೂ ಸಾಮ್ರಾಜ್ಯ.[೬೧]

ಕ್ರಿ. ಶ. ೧೪೧೦ರ ವೇಳೆಗಾಗಲೇ ವಿಜಯನಗರದ ದೊರೆ ಮೊದಲನೇ ದೇವರಾಯನಿಗೆ ಈ ಪ್ರಾಂತ್ಯ ಸೇರಿತ್ತು ಎಂದು ಹಿರಿಯೂರು ಶಾಸನ ಉಲ್ಲೇಖಿಸುತ್ತದೆ.[೬೨] ಹೊಳಕಲ್ಲ ಬೊಮ್ಮನಾಯಕನ ನಿಧನದ ನಂತರ ಅಥವಾ ಇವನನ್ನು ಸೋಲಿಸಿಯೊ ವಿಜಯನಗರದವರು ನಿಡುಗಲ್ಲು ಪ್ರಾಂತ್ಯವನ್ನು ವಶಪಡಿಸಿಕೊಂಡಿರಬಹುದು.[೬೩] ಇಮ್ಮಡಿ ದೇವರಾಯನ (ಕ್ರಿ. ಶ.

೧೪೨೪-೪೬) ಕಾಲಕ್ಕೆ ನಿಡುಗಲ್ಲು ಪಾಳೆಯಗಾರರು ವಿಜಯನಗರದ ಅರಸರಿಗೆ ನಿಷ್ಠಾವಂತ ಸಾಮಂತರಾಗಿ ಆಳ್ವಿಕೆ ಮಾಡುತ್ತಿದ್ದರು. ಇವರ ಸಮಕಾಲೀನನಾಗಿ ಚಿಕ್ಕತಿಪ್ಪನೃಪನು ನಿಡುಗಲ್ಲನ್ನು ಆಳುತ್ತಿದ್ದನು. ಕೃಷ್ಣದೇವರಾಯನ ಕಾಲದಲ್ಲಿ (ಕ್ರಿ. ಶ. ೧೫೧೦-೧೫೨೯) ನಿಡುಗಲ್ಲು ಮಹಾಮಾಂಡಲಿಕನಾಗಿ ಬೊಮ್ಮನಾಯಕನು ಆಳ್ವಿಕೆ ಮಾಡುತ್ತಿದ್ದನು. ನಂತರ ನಿಡುಗಲ್ಲಿನ ಪಾಳೆಯಗಾರ ತಿಮ್ಮಣ್ಣ ನಾಯಕನು ಸದಾಶಿವರಾಯ ಮತ್ತು ಅಳಿಯ ರಾಮರಾಯನಿಗೆ ನಿಷ್ಠೆಯಿಂದ ಇದ್ದು ನಾಯಕತ್ವವನ್ನು ಉಳಿಸಿಕೊಂಡನು. ತಿಮ್ಮಣ್ಣ ನಾಯಕನು ತಾಳಿಕೋಟೆ (೧೫೬೪) ಕದನದಲ್ಲಿ ವಿಜಯನಗರದ ಪರವಾಗಿ ಭಾಗವಹಿಸಿದ್ದನು. ತಾಳಿಕೋಟೆ (ರಕ್ಕಸತಂಗಡಿ) ಕದನದ ನಂತರ ಪೆನುಗೊಂಡೆಯಲ್ಲಿ ಅಧಿಕಾರಕ್ಕೆ ಬಂದ ವಿಜಯನಗರದ ಅರಸರಾದ ಎರಡನೇ ವೆಂಕಟಪತಿ ಮತ್ತು ಶ್ರೀರಂಗನಿಗೆ ನಿಷ್ಠಾವಂತ ಸಾಮಂತರಾಗಿ ನಿಡುಗಲ್ಲು ಪಾಳೆಗಾರರು ಆಳ್ವಿಕೆ ಮಾಡಿದರು.[೭೪]

### ೨.೩.೧೦. ನಿಡುಗಲ್ಲು ನಾಯಕರು

ಬಹುತೇಕ ಪಾಳೆಯಪಟ್ಟಿನ ದಾಖಲೆಗಳು ಪರಿಪಕ್ವವಾಗಿಲ್ಲದ ಕಾರಣ ಸ್ಪಷ್ಟ ಇತಿಹಾಸವಿಲ್ಲದೆ ಮರೆಯಾಗಿ ಹೋಗುತ್ತಿದೆ. ನಿಡುಗಲ್ಲು ದುರ್ಗದ ಪಾಳೆಯಗಾರರ ಬಗೆಗೆ ತಿಳಿಯಲು ನಮಗಿರುವ ತೊಂದರೆಯು ಇದೇ ಆಗಿದೆ. ನಿಡುಗಲ್ಲಿನ ಬಗ್ಗೆ ಮಾಹಿತಿ ದೊರೆತರೂ ಪಾಳೆಯಗಾರರ ಬಗ್ಗೆ ಮಾಹಿತಿಯಿಲ್ಲ. ಬಹುತೇಕರು ಹರತಿಯ ಸಂತತಿಯವರನ್ನು ನಿಡುಗಲ್ಲು ಪಾಳೆಯಗಾರರೆಂದು ತಪ್ಪಾಗಿ ತಿಳಿದಿದ್ದಾರೆ.[೭೫]

ಚಿಕ್ಕತಿಪ್ಪನೃಪ (ಕ್ರಿ. ಶ. ೧೪೫೦-೧೪೯೦)ನ ಮೂಲವಂಶಜ ಅಬ್ಬಿನಾಯಕ ಇವನೇ ನಿಡುಗಲ್ಲು ನಾಯಕ ಮನೆತನದ ಮೊದಲ ಅರಸ. ಆದರೆ ಶಾಸನಗಳನ್ನು ಪರಿಶೀಲಿಸಿದಾಗ ಚಿಕ್ಕತಿಪ್ಪನೃಪನ ಕಾಲದ ಕ್ರಿ. ಶ. ೧೪೮೭ರ ಶಾಸನವೇ ಮೊದಲನೇ ಶಾಸನವಾಗಿದೆ. ಇವನು ಹೊಳಕಲ್ಲ ಬೊಮ್ಮನಾಯಕನ ಶಿರವನ್ನು ತೆಗೆದನೆಂದು ಈ ಶಾಸನದಲ್ಲಿ ಉಲ್ಲೇಖಗೊಂಡಿದೆ. ಇವನ ನಂತರ ಕಾಮಾನಾಯಕ, ಅಬ್ಬಿನಾಯಕ ಆಳ್ವಿಕೆ ಮಾಡಿದರು. ಬೊಮ್ಮನಾಯಕ (ಕ್ರಿ. ಶ. ೧೫೧೦-೧೫೩೦) ಕೃಷ್ಣದೇವರಾಯನಿಂದ ಮಾಚಸಮುದ್ರ, ಗೋಸೀಕೆರೆ, ಚಳ್ಳಕೆರೆ, ದೊಡ್ಡೇರಿ, ಹರತಿಯಿಂದ ಪೂರ್ವದ  ಪಾವಗಡದವರೆಗೆ, ಉತ್ತರದಲ್ಲಿ ಮೊಳಕಾಲ್ಮೂರುವರೆಗೆ, ದಕ್ಷಿಣಕ್ಕೆ ಸಿರಾದವರೆಗಿನ ಪ್ರದೇಶವನ್ನು ಅಮರ ಮಾಗಣಿಯಾಗಿ ಪಡೆದುಕೊಂಡನು ಎಂದು ಮೆಕೆಂಜಿ ಕೈಫಿಯತ್ತುಗಳಲ್ಲಿ ಉಲ್ಲೇಖಗೊಂಡಿದೆ. ಬೊಮ್ಮನಾಯಕನಿಗೆ ಮೂರು ಜನ ಮಕ್ಕಳಿದ್ದು, ಹಿರಿಯಮಗನಾದ ಈಶ್ವರನಾಯಕನಿಗೆ (ಕ್ರಿ. ಶ. ೧೫೩೦-೧೫೩೩) ದೊಡ್ಡೇರಿ, ನಿಡುಗಲ್ಲು ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳನ್ನು ಆಳ್ವಿಕೆ ಮಾಡಲು ನೀಡಿದನು. ಇವನ ನಂತರ

ಚಿಕ್ಕಣ್ಣನಾಯಕ, ಹೊಟ್ಟಣ್ಣ ನಾಯಕರು ಅಧಿಕಾರವಹಿಸಿಕೊಂಡರು. ಇವನ ನಂತರ ಅಧಿಕಾರಕ್ಕೆ ಬಂದ ತಿಮ್ಮಣ್ಣ ನಾಯಕ (ಕ್ರಿ ಶ. ೧೫೫೦-೧೫೭೦)ನಿಗೆ ಸಂಬಂಧಿಸಿದಂತೆ ನಾಲ್ಕು ಶಾಸನಗಳು ಪತ್ತೆಯಾಗಿವೆ. ಇವನು ಸದಾಶಿವರಾಯ, ರಾಮರಾಯ, ಗುತ್ತಿ ತಿರುಮಲ ರಾಜೈಯ ದೇವ ಮಹಾ ಅರಸುಗಳಿಗೆ ನಿಷ್ಠೆಯಿಂದ ಇದ್ದನು. ಈತನು ೧೫೬೪ರಲ್ಲಿ ತಾಳಿಕೋಟೆ ಯುದ್ಧದಲ್ಲಿ ವಿಜಯನಗರದ ಪರವಾಗಿ ಭಾಗವಹಿಸಿ ಮಡಿದಂತೆ ಕಾಣುತ್ತದೆ. ಏಕೆಂದರೆ ೧೫೯೪ರ ನಂತರದ ಕಾಲಕ್ಕೆ ಸಂಬಂಧಿಸಿದಂತೆ ಇವನ ಯಾವುದೇ ಶಾಸನ ದೊರೆತಿಲ್ಲ. ಕೊನೆಗೆ ಇವರ ವಂಶದ ದಾಯಾದಿ ಮನೆತನವಾದ ಹರತಿ ವಂಶಸ್ಥರು ನಿಡುಗಲ್ಲು ಪ್ರದೇಶದ ಅಧಿಕಾರವನ್ನು ವಹಿಸಿಕೊಂಡರು.[೨೬]

### ನಿಡುಗಲ್ಲು ನಾಯಕರ ವಂಶಾವಳಿ



## ೨.೩.೧೧. ಹರತಿ-ನಿಡುಗಲ್ಲು ನಾಯಕರು

'ಹರತಿ' ಎಂಬುದು ಕರ್ನಾಟಕದ ಪ್ರಾಚೀನ ನಾಯಕ ಮನೆತನಗಳಲ್ಲಿ ಒಂದಾಗಿದೆ. ಈ ಮನೆತನದವರು ಬೇರ್ಪಟ್ಟಿರುವುದು ಹರ್ತಿಕೋಟೆ, ಹರತಿ-ಐಮಂಗಲ ಹಾಗೂ ಹರತಿ-ನಿಡುಗಲ್ಲು ಶಾಖೆಗಳಲ್ಲಿ, ಹರತಿ-ನಿಡುಗಲ್ಲು ಶಾಖೆಯವರು ಹರತಿ ಮನೆತನದ ಕೋಟೆಕೆರೆ, ಅಬ್ಬೆನಾಯಕನ ಸಂತತಿಯವರು. ಇವನ ವಂಶಾವಳಿಯಿಂದ ತಿಳಿದುಬರುವಂತೆ ತಿಪ್ಪನಾಯಕನ ಮಗನಾದ ಕಾಮನಾಯಕನ ಇಬ್ಬರು ಮಕ್ಕಳಲ್ಲಿ ಅಬ್ಬೆನಾಯಕನು ಒಬ್ಬನಾಗಿದ್ದಾನೆ.[೭೭]

ಹರತಿ ವೀರ ಹೊಟ್ಟಣ್ಣನಾಯಕ (ಕ್ರಿ. ಶ. ೧೬೩೫-೧೬೬೨)ನಿಗೆ ಸಂಬಂಧಿಸಿದಂತೆ ೧೬೬೨, ೧೬೬೩, ೧೬೭೦ರ ಶಾಸನಗಳು ದೊಡ್ಡೇರಿ, ಸಿರಾ, ಹಿರಿಯೂರು, ಐಮಂಗಲ, ನಿಡುಗಲ್ಲು ದುರ್ಗದ ಸೀಮೆಗಳನ್ನು ವಂಶಪಾರಂಪರೆಯಾಗಿ ಅನುಭವಿಸಲು ಅಪ್ಪಣೆ ಕೊಟ್ಟ ನಿರೂಪದ ವಿಷಯವನ್ನು ಉಲ್ಲೇಖಿಸಿವೆ.[೭೮] ಈತ ಪೆನುಗೊಂಡೆಯಲ್ಲಿ ಆಳ್ವಿಕೆ ಮಾಡುತ್ತಿದ್ದ ಎರಡನೇ ವೆಂಟಪತಿ ಮತ್ತು ಶ್ರೀರಂಗರಾಯರಿಗೆ ತಮ್ಮ ಸ್ವಾಮಿ ನಿಷ್ಠೆಯನ್ನು ಮುಂದುವರೆಸಿದನು. ಮೊಗಲರ ಔರಂಗಜೇಬನು ಬಿಜಾಪುರವನ್ನು ಆಕ್ರಮಿಸಿದ ಮೇಲೆ ಬಿಜಾಪುರಕ್ಕೆ ಅಧೀನವಾಗಿದ್ದ ಪ್ರದೇಶಗಳನ್ನು ಗೆಲ್ಲಲು ಬೂದಿಲಿಂಗಪ್ಪ ಮತ್ತು ಸಿದ್ದಪ್ಪನನ್ನು ನೇಮಿಸಿದಾಗ ನಿಡುಗಲ್ಲು ದುರ್ಗವನ್ನು ಹರತಿ ತಿಮ್ಮಣ್ಣನಾಯಕನು (ಕ್ರಿಶ. ೧೬೬೨-೧೭೦೦) ರಕ್ಷಿಸಲು ಹಲವು ತಂತ್ರಗಳನ್ನು ಅಳವಡಿಸಿಕೊಂಡನು. ಮೊಗಲರ ಸೇನೆ ನಿಡಗಲ್ಲು ದುರ್ಗದ ಮೇಲೆ ದಾಳಿ ಮಾಡಿದಾಗ ಮೂರು ವರ್ಷಗಳ ಕಾಲ ಶರಣಾಗಲಿಲ್ಲ. ಕೊನೆಗೆ ಆಹಾರ ಪದಾರ್ಥ ಮುಗಿದ ಮೇಲೆ ರಾಯದುರ್ಗದ ನಾಯಕನ ಮೋಸದಿಂದ ನಿಡುಗಲ್ಲು ದುರ್ಗ ಮೊಗಲರಿಗೆ ವಶವಾಯಿತು. ಆಗ ತಿಮ್ಮಣ್ಣನಾಯಕ ಕಾಮನದುರ್ಗದಲ್ಲಿ ಆಶ್ರಯ ಪಡೆದನು. ಬೂದಿಲಿಂಗಪ್ಪ ಮರಣ ಹೊಂದಿದ ಮೇಲೆ ನಿಡುಗಲ್ಲನ್ನು ಪುನಃ ಆಕ್ರಮಿಸಿಕೊಂಡನು.

ಮುಮ್ಮಡಿ ಹೊಟ್ಟಣ್ಣನಾಯಕ (ಕ್ರಿ. ಶ. ೧೭೦೦-೧೭೫೧)ನು ಆರಂಭದಲ್ಲಿ ಸಿರಾನವಾಬ ಹಾಗೂ ಚಿತ್ರದುರ್ಗದ ಅರಸರೊಂದಿಗೆ ಉತ್ತಮ ಸಂಬಂಧ ಹೊಂದಿದ್ದನು. ನಂತರದ ಕಾಲದಲ್ಲಿ ಚಿತ್ರದುರ್ಗದ ಹಿರೇಮದಕರಿನಾಯಕನು ನಿಡುಗಲ್ಲನ್ನು ಆಕ್ರಮಿಸಿ ಹೊಟ್ಟಣ್ಣ ನಾಯಕನನ್ನು ಸಾಮಂತನನ್ನಾಗಿಸಿ ಕೊಂಡನು. ವೀರ ಮುಮ್ಮಡಿ ಹೊಟ್ಟಣ್ಣನಾಯಕ (ಕ್ರಿ. ಶ. ೧೭೫೧-೧೭೫೮) ನು ಸಿರಾ ನವಾಬನ ಸಾಮಂತನಾಗಿ ಆಳ್ವಿಕೆ ಮಾಡುತ್ತಿದ್ದನು. ವಾರ್ಷಿಕ ೩೦೦೦ ಪಗೋಡಗಳ ಪೊಗದಿಯನ್ನು ನೀಡಲು ಒಪ್ಪಿದನು. ಇವನ ನಂತರ ತಿಮ್ಮಣ್ಣನಾಯಕ (ಕ್ರಿ. ಶ. ೧೭೫೮-೧೭೯೮) ಹೈದರ್-ಟಿಪ್ಪುವಿನ ಆಶ್ರಯದಲ್ಲಿ ಆಳ್ವಿಕೆ ಮಾಡಿದನು. ಟಿಪ್ಪು ಬ್ರಿಟೀಷರೊಂದಿಗೆ ಹೋರಾಡಲು ತಿಮ್ಮಣ್ಣನಿಗೆ ಸೈನ್ಯ ಸಮೇತ ಮಂಗಳೂರಿಗೆ ಬರಬೇಕೆಂದು,

ನಿಡುಗಲ್ಲಿನಲ್ಲಿ ತನ್ನ ಮಗ ಹೊಟ್ಟಣ್ಣ ನಾಯಕನ ರಕ್ಷಣೆಗೆ ಇರುವ ೫೦೦೦ ಸೈನಿಕರನ್ನು ನೀಡಬೇಕೆಂದು ತಿಳಿಸಿದನು. ಆದರೆ ಮನೋರೋಗದಿಂದ ತಿಮ್ಮಣ್ಣ ಮಂಗಳೂರಿನಲ್ಲೇ ಮರಣ ಹೊಂದಿದನು. ಕೊನೆಗೆ ಟಿಪ್ಪು ತಿಮ್ಮಣ್ಣ ನಾಯಕರ ಇಬ್ಬರು ಮಕ್ಕಳಾದ ಹೊಟ್ಟಣ್ಣನಾಯಕ ಮತ್ತು ಇಮ್ಮಡಿ ಹೊಟ್ಟಣ್ಣ ನಾಯಕರನ್ನು ಸೆರೆಯಲ್ಲಿಟ್ಟು ಗಲ್ಲಿಗೇರಿಸಿದನು. ಇವರೇ ಹರತಿ–ನಿಡುಗಲ್ಲು ನಾಯಕರ ಕೊನೆಯ ಅರಸರಾಗಿದ್ದರು.

**ಹರತಿ–ನಿಡುಗಲ್ಲು ವಂಶಾವಳಿ**



## ೨.೩.೧೨ ಹೊಸಕೋಟೆ ಪಾಳೆಯಗಾರರು:

ಯಲ್ಲಪ್ಪನಾಯಕನು ಹರತಿ ವಂಶದವನಾಗಿದ್ದಾನೆ. ಇವನಿಂದಲೇ ಕೋಟೆಯ ನಿರ್ಮಾಣ ಕಾರ್ಯ ನಡೆಯಿತು. ಈತ ಕ್ರಿ ಶ. ೧೬೫೦ರಿಂದ ೧೬೮೦ರವರೆಗೆ ಆಳ್ವಿಕೆ ಮಾಡಿದನು. ನಿಡುಗಲ್ಲಿನ ವೀರ ಹೊಟ್ಟಣ್ಣನಾಯಕ ಈತನ ಸಮಕಾಲೀನನಾಗಿದ್ದಾನೆ.[೮೦] ಹೊಸಕೋಟೆಯನ್ನು ಯಲ್ಲಪ್ಪ ನಾಯಕನ ನಂತರ ಬಡತಿಮ್ಮಳನಾಯಕ, ರಾಮಪ್ಪನಾಯಕ, ಚಿಕ್ಕಬಡತಿಮ್ಮಳನಾಯಕ, ನಲಜಲ್ಮನಾಯಕ, ರಾಮಪ್ಪನಾಯಕ ಮೊದಲಾದ ಪಾಳೆಯಗಾರರು ಆಳ್ವಿಕೆ ನಡೆಸಿದ್ದಾರೆ.[೮೧]

**ಹೊಸಕೋಟೆ ಪಾಳೆಯಗಾರರ ವಂಶವೃಕ್ಷ**



### ೨.೩.೧೩. ಬಂಗಾರ ನಾಯಕನ ವಂಶಸ್ಥರು:

ಬಂಗಾರ ನಾಯಕನು ಈ ಬೆಟ್ಟದಲ್ಲಿ ಕ್ರಿ. ಶ. ೧೭ನೇ ಶತಮಾನದಲ್ಲಿ ಕೋಟೆ–ಕೊತ್ತಲಗಳನ್ನು ಕಟ್ಟಿಕೊಂಡು ಆಳ್ವಿಕೆ ಮಾಡಿದನು. ಇವನ ನಂತರ ನರಸನಾಯಕ, ಚಿಕ್ಕನಾಯಕ, ಬಂಗಾರವ್ವ ನಾಗತಿ ಆಳ್ವಿಕೆಯನ್ನು ಮುಂದುವರೆಸಿದರು. ಈ ಕೋಟೆ ಹೈದರ್–ಟಿಪ್ಪುವಿನ ಆಕ್ರಮಣಕ್ಕೆ ಒಳಗಾಗಿ ಕೊನೆಗೆ ಕ್ರಿ. ಶ. ೧೮ನೇ ಶತಮಾನದಲ್ಲಿ ಲಾರ್ಡ್‌ಕಾರನ್ ವಾಲಿಸ್‌ನಿಂದ ನಾಶವಾಯಿತು.

### ೨.೩.೧೪. ಕನ್ನಮೇಡಿ ಪಾಳೆಯಗಾರರು:

ಈ ಪ್ರದೇಶವು ಪ್ರಾರಂಭದಲ್ಲಿ ಪೆನುಗೊಂಡೆಯ ಸದಾಶಿವದೇವ ಎನ್ನುವವನ ಆಳ್ವಿಕೆಗೆ ಒಳಪಟ್ಟಿತ್ತು. ನಂತರ ಕ್ರಿ. ಶ. ೧೭೫೦ರಲ್ಲಿ ಇಂದುರಾಯ (ಇಂದ್ರಾಯ) ಎನ್ನುವವನು ಕೋಟೆಯನ್ನು ಕಟ್ಟಿ ಆಳ್ವಿಕೆ ಮಾಡಿದನು. ನಂತರ ಹೈದರ್ ಟಿಪ್ಪು ಈ ಕೋಟೆಯನ್ನು ತಮ್ಮ ನಿಯಂತ್ರಣಕ್ಕೆ ಒಳಪಡಿಸಿಕೊಂಡರು.[೮೩]

### ೨.೩.೧೫. ಹೈದರ್–ಟಿಪ್ಪು:

ಕ್ರಿ. ಶ. ೧೭೬೧ರಲ್ಲಿ ಹೈದರನು ಸಿರಾ ಕೋಟೆಯನ್ನು ಆಕ್ರಮಿಸಿ ನಿಡುಗಲ್ಲಿಗೆ ಮುತ್ತಿಗೆ ಹಾಕಿದನು. ಕೊನೆಗೆ ತಿಮ್ಮನಾಯಕನೊಂದಿಗೆ ಒಪ್ಪಂದ ಮಾಡಿಕೊಂಡು ನಿಡುಗಲ್ಲನ್ನು ಹಿಂದಿರುಗಿಸಿದನು.[೮೪] ಹೈದರನ ಮಗನಾದ ಟಿಪ್ಪು ಸುಲ್ತಾನನು ಇಂಗ್ಲೀಷರ ವಿರುದ್ಧ ಮಂಗಳೂರಿಗೆ ಮುತ್ತಿಗೆಯನ್ನು ಹಾಕಿದಾಗ ತಿಮ್ಮಣ್ಣನಾಯಕನನ್ನು ಸೈನ್ಯ ಸಮೇತವಾಗಿ ಜೊತೆಯಲ್ಲಿ ಕರೆದೊಯ್ದನು. ಆದರೆ ತಿಮ್ಮಣ್ಣನಾಯಕ ಯುದ್ಧರಂಗದಲ್ಲಿಯೇ ಮನೋರೋಗದಿಂದ ಮರಣ ಹೊಂದಿದನು.[೮೫] ಅವನ ಮಗ ಹೊಟ್ಟಣ್ಣನಾಯಕನಿಗೆ ೫೦೦೦ ಸೈನಿಕರನ್ನು ಕೊಡುವಂತೆ ಹೇಳಿ ತಿಮ್ಮನಾಯಕನಿಂದ ಬರೆಸಿಕೊಂಡ ಪತ್ರವನ್ನು ದವಲತ್‌ಖಾನನ ಮೂಲಕ ಹೊಟ್ಟಣ್ಣನಾಯಕನಿಗೆ ನೀಡಿದನು. ಹೊಟ್ಟಣ್ಣ ನಾಯಕ ಇದನ್ನು ನಿರಾಕರಿಸಿದ್ದರಿಂದ ದವಲತ್‌ಖಾನನು ನಿಡುಗಲ್ಲನ್ನು ವಶಪಡಿಸಿಕೊಂಡು ತಿಮ್ಮಣ್ಣನಾಯಕನ ಇಬ್ಬರು ಮಕ್ಕಳಾದ ಹೊಟ್ಟಣ್ಣನಾಯಕ, ಇಮ್ಮಡಿ ಹೊಟ್ಟಣ್ಣನಾಯಕನನ್ನು ಬಂಧಿಸಿ ಚಿತ್ರದುರ್ಗದ ಸೆರೆಯಲ್ಲಿಟ್ಟನು. ನಂತರ ಶ್ರೀರಂಗಪಟ್ಟಣಕ್ಕೆ ಇವರನ್ನು ವರ್ಗಾಯಿಸಿದನು. ಕೊನೆಗೆ ಬ್ರಿಟಿಷರು ದಾಳಿ ಮಾಡುವ ಸಮಯದಲ್ಲಿ ಇವರನ್ನು ಗಲ್ಲಿಗೇರಿಸಿದನು. ಹೈದರ್–ಟಿಪ್ಪು ನಿಡುಗಲ್ಲು ದುರ್ಗದ ಮೇಲೆ ದಾಳಿ ಮಾಡಿದಾಗ ಸಹಜವಾಗಿ ಈ ಪರಿಸರದಲ್ಲಿರುವ ಕೋಟೆಗಳು ಇವರ ಆಕ್ರಮಣಕ್ಕೆ ಒಳಗಾದವು.

### ೨.೩.೧೬. ಮೈಸೂರು ಒಡೆಯರು:

ನಾಲ್ಕನೇ ಆಂಗ್ಲೋ–ಮೈಸೂರು ಯುದ್ಧದಲ್ಲಿ ಟಿಪ್ಪು ಮಡಿದ ಮೇಲೆ ಬ್ರಿಟಿಷರು ಸೆರೆಯಲ್ಲಿದ್ದ

ನಿಡುಗಲ್ಲು ರಾಜಮನೆತನದವರು ಹಾಗೂ ಅರಮನೆಗೆ ನಿಷ್ಠರಾಗಿದ್ದವರನ್ನು ಬಿಡುಗಡೆ ಮಾಡಿ[೮೬] ಈ ಪ್ರಾಂತ್ಯವನ್ನು ಮೈಸೂರು ಒಡೆಯನಾದ ಮುಮ್ಮಡಿ ಕೃಷ್ಣರಾಜ ಒಡೆಯರ ಅಧೀನಕ್ಕೆ ಒಳಪಡಿಸಿದರು (ಕ್ರಿ. ಶ. ೧೮೧೧-೧೮೩೧). ಈತ ಮೈಸೂರು ಸಂಸ್ಥಾನವನ್ನು ಆರು ಭಾಗ ಮಾಡಿ ನಿಡುಗಲ್ಲು ಪ್ರಾಂತ್ಯವನ್ನು ಮಧುಗಿರಿ ಪ್ರಾಂತ್ಯಕ್ಕೆ ಸೇರಿಸಿದನು. ೧೮೬೨ರಲ್ಲಿ ಬ್ರಿಟಿಷರ ಕಮೀಷನರ್ ಲಾರ್ಡ್ ಬೌರಿಂಗ್ ಸಂಸ್ಥಾನವನ್ನು ಎಂಟು ಭಾಗ ಮಾಡಿ ನಿಡುಗಲ್ಲನ್ನು ಚಿತ್ರದುರ್ಗ ಜಿಲ್ಲೆಗೆ ಸೇರಿಸಿದನು. ನಂತರ ೧೮೬೩ರಲ್ಲಿ ಚಿತ್ರದುರ್ಗ ವಿಭಾಗವನ್ನು ನಂದಿದುರ್ಗಕ್ಕೆ ಸೇರಿಸಿ ನಿಡುಗಲ್ಲನ್ನು ಚಿತ್ರದುರ್ಗದಿಂದ ತುಮಕೂರು ಜಿಲ್ಲೆಗೆ ವರ್ಗಾಯಿಸಲಾಯಿತು. ೧೯೧೫ ಮತ್ತು ೧೯೩೮ರಲ್ಲಿ ತುಮಕೂರನ್ನು ಎರಡು ಮತ್ತು ಮೂರು ವಿಭಾಗ ಮಾಡಿ ಮಧುಗಿರಿ ಉಪವಿಭಾಗಕ್ಕೆ ನಿಡುಗಲ್ಲನ್ನು ನೀಡಲಾಯಿತು.[೮೭]

### ೨.೩.೧೭ ಸ್ವಾತಂತ್ರ್ಯ ಹೋರಾಟ:

ನಿಡುಗಲ್ಲು ಪ್ರಾಂತ್ಯವು ರಾಜಕೀಯ ಪ್ರಜ್ಞೆಯಲ್ಲಿ ತೀರಾ ಹಿಂದುಳಿದ ಪ್ರದೇಶವಾಗಿತ್ತು. ಈ ಪ್ರಾಂತ್ಯದಲ್ಲಿ ಪಾನ ನಿರೋಧದ ಬಗ್ಗೆ ಹೋರಾಟ, ಸೇಂದಿ ಅಂಗಡಿಗಳ ಮುಂದೆ ಸತ್ಯಾಗ್ರಹ, ವಿದೇಶಿ ಬಟ್ಟೆಗಳ ಬಹಿಷ್ಕಾರ, ಅಸಹಕಾರ ಮತ್ತು ಕ್ವಿಟ್ ಇಂಡಿಯಾ ಚಳುವಳಿ[೮೮] ಹಾಗೂ ೧೯೪೭ರಲ್ಲಿ ಸತ್ಯಾಗ್ರಹಿಗಳು ಜಾಥಾಗಳನ್ನು ನಡೆಸಿದರು.[೮೯] ಈ ಭಾಗದ ಪ್ರಮುಖ ಸ್ವತಂತ್ರ ಹೋರಾಟಗಾರರೆಂದರೆ ಕೆ. ನಂಜುಂಡರಾವ್, ರಥಾಂಗಪಾಣಿ, ಬುಡದಾಸರ ಗೋವಿಂದಪ್ಪ, ಅರಸಿಕೆರೆ ನಂಜುಂಡರಾವ್, ಪಿ. ರಾಮರಾವ್, ಅಂಬೇಕರ್ ನರಸಿಂಗರಾವ್, ವೆಂಕಟೇಶಗುಪ್ತ, ಶಿವಲಿಂಗಯ್ಯ,[೯೦] ವೆಂಕಟಾಪುರ ನರಸಿಂಹರೆಡ್ಡಿ, ಎಂ. ಅಂಜನಪ್ಪ, ಕಾಮಸಂಜಣ್ಣ, ನಾಯಕರ ಸನ್ನಾಯಕ, ಹನುಮಂತರೆಡ್ಡಿ, ದೊಮ್ಮತಮರಿಯ ಸಂಜೀವರಾಯ, ವೆಂಕಟಗಿರಿಯಪ್ಪ, ಗೋಪಾಲಯ್ಯ ಮೊದಲಾದವರು.[೯೧]

ಹೀಗೆ ನಿಡುಗಲ್ಲು ಪರಿಸರವು ಅನಾದಿ ಕಾಲದಿಂದಲೂ ಸ್ವತಂತ್ರ ಚಳುವಳಿಯವರೆಗೂ ವಿವಿಧ ರೀತಿಯ ಚಾರಿತ್ರಿಕ ಘಟ್ಟಗಳನ್ನು ಹೊಂದಿ ತನ್ನ ಮಹತ್ವವನ್ನು ಸಾರಲು ಅವರು ಬಳಸಿಬಿಟ್ಟುಹೋದ ಭೌತಿಕ ಅವಶೇಷಗಳು ಇಂದು ಚರಿತ್ರೆಗೆ ಸಾಕ್ಷೀಭೂತವಾಗಿದೆ.

**ಅಡಿಟಿಪ್ಪಣಿಗಳು:**

೦೧. ರಂಗಲಕ್ಷ್ಮಿ ಪಿ.ಎ., ೨೦೦೫, ಪಾವಗಡ ತಾಲ್ಲೂಕಿನ ಜಾನಪದ ವೀರನಾಯಕರು, ಪುಟ-೧೩.

೦೨. ಸೂರ್ಯನಾಥ ಯು. ಕಾಮತ್ (ಸಂ), ೨೦೦೫, ಕರ್ನಾಟಕ ರಾಜ್ಯ ಗ್ಯಾಸೆಟೀಯರ್ ಭಾಗ-೩, ಪುಟ-೫೩೬.

೦೩. ಚೆಲುವರಾಜನ್ ಆರ್., ೧೯೮೭, ಪಾವಗಡ ತಾಲ್ಲೂಕು ದರ್ಶನ, ಪುಟ-೮.

೦೪. ಪರಂಜ್ಯೋತಿ, ಭಾನುವಾರ ೦೬.೦೩.೨೦೦೭, ಪ್ರಜಾವಾಣಿ ದಿನಪತ್ರಿಕೆ.

೦೫. ರಂಗಲಕ್ಷ್ಮೀ ಪಿ.ಎ., ಪೂರ್ವೋಕ್ತ, ಪುಟ-೧೮.

೦೬. ಚೆಲುವರಾಜನ್ ಆರ್., ಪೂರ್ವೋಕ್ತ, ಪುಟ-೮.

೦೭. ರಂಗಲಕ್ಷ್ಮೀ ಪಿ.ಎ., ಪೂರ್ವೋಕ್ತ, ಪುಟ-೧೯.

೦೮. ರಾಮಚಂದ್ರಪ್ಪ ಹ. (ಸಂ), ೨೦೦೪, ಪಿನಾಕಿನಿ ಸ್ಮರಣ ಸಂಚಿಕೆ, ಪುಟ-೧೩-೧೪.

೦೯. ನಾಗರಾಜ್ ಎಂ.ಜಿ. ಮತ್ತು ಕೃಷ್ಣಮೂರ್ತಿ ಎ. (ಸಂ), ೨೦೦೩, ಇತಿಹಾಸ ದರ್ಶನ, ಸಂಪುಟ-೧೮, ಪುಟ-೧೫೮.

೧೦. ರಾಮಚಂದ್ರಪ್ಪ ಹ. (ಸಂ), ಪೂರ್ವೋಕ್ತ, ಪುಟ-೨೩.

೧೧. ನಾಗರಾಜ್ ಎಂ.ಜಿ. ಮತ್ತು ಕೃಷ್ಣಮೂರ್ತಿ ಎ. (ಸಂ), ಪೂರ್ವೋಕ್ತ, ಪುಟ-೧೫೮.

೧೨. ರಾಮಚಂದ್ರಪ್ಪ ಹ. (ಸಂ), ಪೂರ್ವೋಕ್ತ, ಪುಟ-೨೪.

೧೩. ಪರಂಜ್ಯೋತಿ, ಭಾನುವಾರ ೦೬.೦೩.೨೦೦೭, ಪ್ರಜಾವಾಣಿ ದಿನಪತ್ರಿಕೆ.

೧೪. ಚೆಲುವರಾಜನ್ ಆರ್., ಪೂರ್ವೋಕ್ತ, ಪುಟ-೧೨-೧೫.

೧೫. ರಾಮಚಂದ್ರಪ್ಪ ಹ. (ಸಂ), ಪೂರ್ವೋಕ್ತ, ಪುಟ-೨೪.

೧೬. ಚೆಲುವರಾಜನ್ ಆರ್., ಪೂರ್ವೋಕ್ತ, ಪುಟ-೯-೧೨.

೧೭. ರಾಮಚಂದ್ರಪ್ಪ ಹ. (ಸಂ), ಪೂರ್ವೋಕ್ತ, ಪುಟ-೨೩.

೧೮. ರಂಗಲಕ್ಷ್ಮೀ ಪಿ.ಎ., ಪೂರ್ವೋಕ್ತ, ಪುಟ-೧೩.

೧೯. ಲಕ್ಷ್ಮಣ ಸಿ.ಎಂ, ೨೦೦೦, ತುಮಕೂರು ಜಿಲ್ಲೆಯ ಭೌಗೋಳಿಕ ಪರಿಸರ ಮತ್ತು ಅಭಿವೃದ್ಧಿ, ಪುಟ-೧೨.

೨೦. ರಾಮಚಂದ್ರಪ್ಪ ಹ. (ಸಂ), ಪೂರ್ವೋಕ್ತ, ಪುಟ-೨೩.

೨೧. ಚೆಲುವರಾಜನ್ ಆರ್., ಪೂರ್ವೋಕ್ತ, ಪುಟ-೪೫.

೨೨. ಚಂದ್ರಶೇಖರಪ್ಪ ಟಿ.ಜಿ, ೨೦೦೭, ಭಾರತದ ಇತಿಹಾಸ, ಪುಟ-೧೦.

೨೩. ಶಿವತಾರಕ್ ಕೆ.ಬಿ., ೨೦೦೧, ಕರ್ನಾಟಕದ ಪುರಾತತ್ವ ನೆಲೆಗಳು, ಪುಟ-೭.

೨೪. ಸತ್ಯಲಿಂಗರಾಜು ಜಿ.ಆರ್., ೨೦೦೬, ಪುರಾತತ್ವ ಮಾನವಶಾಸ್ತ್ರ, ಪುಟ-೭೬-೭೭.

೨೫. ಚಂದ್ರಶೇಖರಪ್ಪ ಟಿ.ಜಿ, ಪೂರ್ವೋಕ್ತ, ಪುಟ-೧೩.

೨೬. ಸತ್ಯಲಿಂಗರಾಜು ಜಿ.ಆರ್., ಪೂರ್ವೋಕ್ತ, ಪುಟ-೯೫, ೯೬.

೨೭. ಚೆಲುವರಾಜನ್ ಆರ್., ಪೂರ್ವೋಕ್ತ, ಪುಟ-೧೬.

೨೮. ನಾಗರಾಜ್ ಎಂ.ಜಿ, ಕೃಷ್ಣಮೂರ್ತಿ ಪಿ.ಎ. (ಸಂ), ೨೦೦೩, ಪೂರ್ವೋಕ್ತ, ಪುಟ-೫,೬.

೨೯. ಶಿವತಾರಕ್ ಕೆ.ಬಿ., ೨೦೦೧, ಪೂರ್ವೋಕ್ತ, ಪುಟ-೯೫-೯೬, ೩೨೦.

೩೦. ರಾಮಚಂದ್ರಪ್ಪ ಹ. (ಸಂ), ಪೂರ್ವೋಕ್ತ, ಪುಟ-೧೧.

೩೧. ಚೆಲುವರಾಜನ್ ಆರ್., ಪೂರ್ವೋಕ್ತ, ಪುಟ-೨೩.

೩೨. ವಸು ಎಂ.ವಿ. (ಸಂ), ೨೦೦೧, ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪುಟ-೨-೫.

೩೩. ನಿರಂಜನ ಕೆ. ಆರ್., ೨೦೦೬, ಕರ್ನಾಟಕ ಪರಂಪರೆ ಸಂಪುಟ-೧, ಪುಟ-೧೪೪.

೩೪. ನಿರಂಜನ ಕೆ. ಆರ್., ೨೦೦೬, ಕರ್ನಾಟಕ ಪರಂಪರೆ, ಸಂಪುಟ-೨, ಪುಟ-೩೧೯.

೩೫. ಮಜುಂದಾರ್ ಆರ್.ಸಿ. (ಸಂ.), ಭಾರತೀಯ ಜನತೆಯ ಇತಿಹಾಸ ಮತ್ತು ಸಂಸ್ಕೃತಿ ಸಂಪುಟ-೭, ಪುಟ-೧೯೯, ೨೦೧.

೩೬. ಬಸವರಾಜು ಕೆ.ಆರ್. (ಸಂ), ಪೂರ್ವೋಕ್ತ, ಪುಟ-೩೭.

೩೭. ಬಸವರಾಜು ಕೆ.ಆರ್. (ಸಂ), ಪೂರ್ವೋಕ್ತ, ಪುಟ-೧೮.

೩೮. ವಸು ಎಂ.ವಿ. (ಸಂ), ಪೂರ್ವೋಕ್ತ, ಪುಟ-೨.

೩೯. ಬಸವರಾಜು ಕೆ.ಆರ್. (ಸಂ), ಪೂರ್ವೋಕ್ತ, ಪುಟ-೨೩-೨೬.

೪೦. ವಸು ಎಂ.ವಿ. (ಸಂ), ಪೂರ್ವೋಕ್ತ, ಪುಟ-೪.

೪೧. ಚೆಲುವರಾಜನ್ ಆರ್., ಪೂರ್ವೋಕ್ತ, ಪುಟ-೨೩.

೪೨. ವಸು ಎಂ.ವಿ. (ಸಂ), ಪೂರ್ವೋಕ್ತ, ಪುಟ-೪.

೪೩. ನಿರಂಜನ ಕೆ. ಆರ್., ೨೦೦೬, ಕರ್ನಾಟಕ ಪರಂಪರೆ, ಸಂಪುಟ-೨, ಪುಟ-೧೬೬.

೪೪. ಬಸವರಾಜು ಕೆ.ಆರ್. (ಸಂ), ಪೂರ್ವೋಕ್ತ, ಪುಟ-೪೫.

೪೫. ವಸು ಎಂ.ವಿ. (ಸಂ), ಪೂರ್ವೋಕ್ತ, ಪುಟ-೨.

೪೬. ಬಸವರಾಜು ಕೆ.ಆರ್. (ಸಂ), ಪೂರ್ವೋಕ್ತ, ಪುಟ-೫೨.

೪೭. ವಸು ಎಂ.ವಿ. (ಸಂ), ಪೂರ್ವೋಕ್ತ, ಪುಟ-೮, ೯.

೪೮. ನಿರಂಜನ ಕೆ. ಆರ್., ೨೦೦೬, ಪೂರ್ವೋಕ್ತ, ಪುಟ-೧೬೮.

೪೯. ಚಂದ್ರಶೇಖರಪ್ಪ ಟಿ.ಜಿ, ಪೂರ್ವೋಕ್ತ, ಪುಟ-೨೭೨-೨೭೩.

೫೦. ಬಸವರಾಜು ಕೆ.ಆರ್. (ಸಂ), ೨೦೦೫, ನೊಳಂಬ ಇತಿಹಾಸ ದರ್ಶನ, ಪುಟ-೨೨.

೫೧. ನಂದೀಶ್ವರ ಎನ್., ೨೦೦೮, ಸಿರಾ ತಾಲ್ಲೂಕು ದರ್ಶನ, ಪುಟ-೨೩-೨೬.

೫೨. ವಸು ಎಂ.ವಿ. (ಸಂ), ಪೂರ್ವೋಕ್ತ, ಪುಟ-೫೬.

೫೩. ಶ್ರೀನಿವಾಸಮೂರ್ತಿ ಹೆಚ್.ವಿ, ಮತ್ತು ರಾಮಕೃಷ್ಣನ್ ಆರ್ (ಸಂ), ೧೯೯೭, ಸಮಗ್ರ ಕರ್ನಾಟಕ ಚರಿತ್ರೆ, ಪುಟ-೧೦೩.

೫೪. ಬಸವರಾಜು ಕೆ.ಆರ್. (ಸಂ), ಪೂರ್ವೋಕ್ತ, ಪುಟ-೪೮.

೫೫. ಪುಷ್ಪ ತಾ.ಸ., ೧೯೮೫, ನಿಡುಗಲ್ಲು ವೈಭವ, ಪುಟ-೯೮.

೫೬. ಎಪಿಗ್ರಾಫಿಯಾ ಕರ್ನಾಟಕ, ಸಂಪುಟ-೧೨, ಪುಟ-೨.

೫೭. ಪರಮಶಿವಮೂರ್ತಿ ಡಿ.ವಿ., ೧೯೯೬, ಸಂಶೋಧನೇ ಸಿರಿ, ಪುಟ-೨.

೫೮. ಶ್ರೀನಿವಾಸಮೂರ್ತಿ ಹೆಚ್.ವಿ., ಮತ್ತು ರಾಮಕೃಷ್ಣನ್ ಆರ್ (ಸಂ), ಪೂರ್ವೋಕ್ತ, ಪುಟ-೧೯೨, ೧೯೩.

೫೯. ಪ್ರಸನ್ನಮೂರ್ತಿ ಎಸ್.ಎನ್., ಭಾನುವಾರ, ೨-೧೨-೨೦೦೭, ಪ್ರಜಾವಾಣಿ ದಿನಪತ್ರಿಕೆ.

೬೦. ವಸು ಎಂ.ವಿ. (ಸಂ), ಪೂರ್ವೋಕ್ತ, ಪುಟ-೧೯-೨೩.

೬೧. ಸೂರ್ಯನಾಥ ಕಾಮತ್ ಮತ್ತು ಕೃಷ್ಣಮೂರ್ತಿ ಪಿ.ವಿ. (ಸಂ), ೧೯೯೬, ಇತಿಹಾಸದ ಸಂಪುಟ-೧೧, ಪುಟ-೨೪೭.

೬೨. ವಸು ಎಂ.ವಿ. (ಸಂ), ಪೂರ್ವೋಕ್ತ, ಪುಟ-೧೬-೧೭.

೬೩. ಸೂರ್ಯನಾಥ ಕಾಮತ್ ಮತ್ತು ಕೃಷ್ಣಮೂರ್ತಿ ಪಿ.ವಿ. (ಸಂ), ಪೂರ್ವೋಕ್ತ, ಪುಟ-೨೪೩.

೬೪. ವಸು ಎಂ.ವಿ. (ಸಂ), ಪೂರ್ವೋಕ್ತ, ಪುಟ-೧೮-೨೦.

೬೫. ಸೂರ್ಯನಾಥ ಕಾಮತ್ ಮತ್ತು ಕೃಷ್ಣಮೂರ್ತಿ ಪಿ.ವಿ. (ಸಂ), ಪೂರ್ವೋಕ್ತ, ಪುಟ-೨೪೩.

೬೬. ಎಪಿಗ್ರಾಫಿಯಾ ಕರ್ನಾಟಕ, ಸಂಪುಟ-೧೨, ಪುಟ-೨೦-೨೪.

೬೭. ಸೂರ್ಯನಾಥ ಕಾಮತ್ ಮತ್ತು ಕೃಷ್ಣಮೂರ್ತಿ ಪಿ.ವಿ. (ಸಂ), ಪೂರ್ವೋಕ್ತ, ಪುಟ-೨೪೪.

೬೮. ಪ್ರಸನ್ನಮೂರ್ತಿ ಎಸ್.ಎನ್., ಭಾನುವಾರ, ೨-೧೨-೨೦೦೭, ಪ್ರಜಾವಾಣಿ ದಿನಪತ್ರಿಕೆ.

೬೯. ವಸು ಎಂ.ವಿ. (ಸಂ), ಪೂರ್ವೋಕ್ತ, ಪುಟ-೨೧-೨೨.

೭೦. ಸೂರ್ಯನಾಥ ಕಾಮತ್ ಮತ್ತು ಕೃಷ್ಣಮೂರ್ತಿ ಪಿ.ವಿ. (ಸಂ), ಪೂರ್ವೋಕ್ತ, ಪುಟ-೨೪೪.

೭೧. ಪ್ರಸನ್ನಮೂರ್ತಿ ಎಸ್.ಎನ್., ಭಾನುವಾರ, ೨-೧೨-೨೦೦೭, ಪ್ರಜಾವಾಣಿ ದಿನಪತ್ರಿಕೆ.

೭೨. ಶ್ರೀನಿವಾಸಮೂರ್ತಿ ಹೆಚ್.ವಿ, ಮತ್ತು ರಾಮಕೃಷ್ಣನ್ ಆರ್ (ಸಂ), ಪೂರ್ವೋಕ್ತ, ಪುಟ-೧೭೩.

೭೩. ಎಫಿಗ್ರಾಫಿಯಾ ಕರ್ನಾಟಕ ಸಂಪುಟ-೧೧, ಹಿರಿಯೂರು-೨೮.

೭೪. ಪರಮಶಿವಮೂರ್ತಿ ಡಿ.ವಿ., ಪೂರ್ವೋಕ್ತ, ಪುಟ-೧.

೭೫. ವಸು ಎಂ.ವಿ. (ಸಂ), ಪೂರ್ವೋಕ್ತ, ಪುಟ-೫೨-೫೪, ೬೩.

೭೬. ಪರಮಶಿವಮೂರ್ತಿ ಡಿ.ವಿ., ಪೂರ್ವೋಕ್ತ, ಪುಟ-೧.

೭೭. ವಸು ಎಂ.ವಿ. (ಸಂ), ಪೂರ್ವೋಕ್ತ, ಪುಟ-೫೨-೫೪.

೭೮. ಭಟ್‌ಸೂರಿ ಕೆ.ಜಿ. (ಸಂ), ೨೦೦೬, ಶಾಸನ ಅಧ್ಯಯನ ಸಂಪುಟ-೩, ಸಂಚಿಕೆ-೧, ಪುಟ-೬೫, ೬೬.

೭೯. ಶಿವಲಿಂಗನಾಯಕ (ಸಂ), ೨೦೦೮, ಜೂನ್, ಪಾಳೆಯಗಾರರ ಅಸ್ಥಿತ್ವ ಮಾಸಿಕ ಪತ್ರಿಕೆ.

೮೦. ವಸು ಎಂ.ವಿ. (ಸಂ), ಪೂರ್ವೋಕ್ತ, ಪುಟ-೫೭-೫೮, ೯೪.

೮೧. ಲಕ್ಷ್ಮಣ ತೆಲಗಾವಿ (ಸಂ), ೧೯೮೭, ಹರತಿ ಸಿರಿ, ಪುಟ-೨೯೮.

೮೨. ಯೋಗೀಶ್ವರಪ್ಪ, ೨೦೦೨, ಕಲ್ಪಸಿರಿ, ಪುಟ-೩೪೭.

೮೩. ಗೋಪಾಲ ಆರ್. (ಸಂ), ೨೦೦೯, ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪುಟ-೪೦೯.

೮೪. ರಾಮಚಂದ್ರಪ್ಪ ಹ. (ಸಂ), ಪೂರ್ವೋಕ್ತ, ಪುಟ-೧೩-೧೫.

೮೫. ಚೆಲುವರಾಜನ್ ಆರ್., ಪೂರ್ವೋಕ್ತ, ಪುಟ-೨೩.

೮೬. ರಂಗಲಕ್ಷ್ಮೀ ಪಿ.ಎ., ಪೂರ್ವೋಕ್ತ, ಪುಟ-೨೬.

೮೭. ವಸು ಎಂ.ವಿ. (ಸಂ), ಪೂರ್ವೋಕ್ತ, ಪುಟ-೬೧, ೬೨.

೮೮. ರಂಗಲಕ್ಷ್ಮೀ ಪಿ.ಎ., ಪೂರ್ವೋಕ್ತ, ಪುಟ-೨೭.

೮೯. ಚೆಲುವರಾಜನ್ ಆರ್., ಪೂರ್ವೋಕ್ತ, ಪುಟ-೨೫.

೯೦. ಸೂರ್ಯನಾಥ ಕಾಮತ್ (ಸಂ), ೧೯೭೪, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ-೧, ಪುಟ-೮೫೩.

೯೧. ಚೆಲುವರಾಜನ್ ಆರ್. ಪೂರ್ವೋಕ್ತ, ಪುಟ-೨೫, ೨೬.

ಅಧ್ಯಾಯ ೩

# ರಕ್ಷಣಾ ವಾಸ್ತುಶಿಲ್ಪ

## ೩.೧. ಕೋಟೆ

ಸಾಮಾನ್ಯವಾಗಿ ಕೋಟೆ ಎಂದರೆ ರಕ್ಷಣಾ ಆವರಣವುಳ್ಳ ಪ್ರದೇಶ ಎಂದರ್ಥ. ಅಂದರೆ ರಾಜನು ತನ್ನ ಪರಿವಾರ ಹಾಗೂ ಪ್ರಜೆಗಳು ಸಂಪತ್ತಿನ ರಕ್ಷಣೆಗಾಗಿ ನಿರ್ಮಿಸಿಕೊಂಡ ಭದ್ರವಾದ ಗೋಡೆ ಮತ್ತು ಬಾಗಿಲುಳ್ಳ ಕೋಟೆಯಾಗಿದೆ. ಎಂದು ರಾಜನೀತಿ ಪ್ರಕಾಶದಲ್ಲಿ 'ಬೃಹಸ್ಪತಿಯ ವಚನವು' ಉಲ್ಲೇಖಿಸಿದೆ.[೧] ಕೋಟೆ ಅಥವಾ ರಕ್ಷಣಾ ಆವರಣವನ್ನು ಸಂಸ್ಕೃತದಲ್ಲಿ 'ದುರ್ಗ' ಎಂದು ಕರೆಯುತ್ತಾರೆ. ಸೈನಿಕರುಗಳಿಂದ ಆವರಿಸಲ್ಪಟ್ಟ ರಕ್ಷಿತವಾದ ದೊಡ್ಡ ಸ್ಥಳ ಮತ್ತು ಸಾಮಾನ್ಯವಾಗಿ ಗೋಡೆಗಳು, ಕಂದಕಗಳು ಮತ್ತು ರಕ್ಷಣಾರ್ಥ ಕಾರ್ಯಗಳಿಂದ ಆವರಿಸಲ್ಪಟ್ಟ ರಕ್ಷಿತವಾದ ಹಿರಿದಾದ ಸ್ಥಳ. ಕೆಲವೊಮ್ಮೆ ಆಕ್ರಮಣವನ್ನು ಎದುರಿಸಲು ಬೇಕಾಗುವ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಲು ರಕ್ಷಣಾ ಸಾಧನಗಳಿಂದ ಮತ್ತು ರಕ್ಷಣಾ ಕಾರ್ಯಗಳಲ್ಲಿ ತೊಡಗಿರುವ ಸಿಪಾಯಿಗಳಿಂದ ಸುತ್ತುವರಿಯಲ್ಪಟ್ಟ ಪಟ್ಟಣವೆಂದು ಭಾವಿಸುತ್ತಾರೆ. ಕೋಟೆಯು ಶತ್ರುಗಳಿಗೆ ಅಗಮ್ಯವಾದ ಹೊಂದಲಾಗದ ಮತ್ತು ದುರ್ಗಮವಾದ ಗೋಡೆಗಳಿಂದ ಕಟ್ಟಲ್ಪಟ್ಟಿರುತ್ತದೆ.[೨]

ವೈದಿಕ ಸಾಹಿತ್ಯದಲ್ಲಿ ಕೋಟೆಗಳಿಗೆ ಮಹಾಪುರ ಅಥವಾ ಪುರ ಎಂಬ ಪದವನ್ನು ಬಳಸಲಾಗಿದೆ. ಮಹಾಪುರ ಎಂದರೆ ಭದ್ರವಾದ ಗೋಡೆಗಳಿಂದ ಸುತ್ತುವರಿಯಲ್ಪಟ್ಟಿರುವ ದೊಡ್ಡ ಪಟ್ಟಣ ಎಂದರ್ಥ.[೩] ಗಡ – ಕೋಟೆ – ದುರ್ಗ ಎಂಬ ಮರಾಠಿ ಕೃತಿಯಲ್ಲಿ ಗಡ ಎಂದರೆ 'ಬೆಟ್ಟದ ಮೇಲಿನ ಕೋಟೆ', ಕೋಟೆ ಎಂದರೆ 'ಸಮತಟ್ಟಾದ ನೆಲದ ಮೇಲೆ ಕಟ್ಟಿಕೊಂಡ ಕೋಟೆ', ದುರ್ಗ ಎಂದರೆ 'ಗಿರಿಕಂದರ ದ್ವೀಪಗಳಲ್ಲಿ ಕಟ್ಟಿಕೊಂಡ ಕೋಟೆ' ಎಂದು ಅರ್ಥೈಸಲು ಪ್ರಯತ್ನಿಸಲಾಗಿದೆ.[೪] ಹಳೆಗನ್ನಡದಲ್ಲಿ ಕೋಂಟೆ ಎಂಬ ಮೂಲಪದವಿದ್ದು, ಇದನ್ನು

ಹೊಸಗನ್ನಡದಲ್ಲಿ ಕೋಟೆ ಎಂದು ಕರೆಯಲಾಗುತ್ತದೆ. ಕೋಟೆ ಎಂದರೆ ಎತ್ತರವೂ ಬಲತ್ತರವೂ ಆದ ಸುತ್ತುಗೋಡೆ: ಕಿಲ್ಲೆ-ದುರ್ಗ ಎಂದರ್ಥ.[೫] ಕೋಟೆಯನ್ನು ಆಂಗ್ಲಭಾಷೆಯಲ್ಲಿ ಫೋರ್ಟ್ ಎಂದು ಕರೆಯುತ್ತಾರೆ. ಈ ಪದವನ್ನು ವಿಸ್ತರಿಸಿ ವಿಶಿಷ್ಟ ಅರ್ಥವೊಂದನ್ನು ಕಲ್ಪಿಸಬಹುದು. F=Formidable, O=Obstruct, R=Rampart, T=Tactics ಎಂಬುದಾಗಿ ಹೇಳಬಹುದು. ಅಂದರೆ "ಕೋಟೆಯು ಯುದ್ಧ ತಂತ್ರದ ಒಂದು ರಚನೆಯಾಗಿದ್ದು ಶತ್ರುಗಳಿಗೆ ದಿಗಿಲು ಹುಟ್ಟಿಸುವಂತಹ ತಡೆಗೋಡೆಯಾಗಿದೆ.[೬]

### ೩.೨. ವ್ಯಾಖ್ಯಾನಗಳು

ಕೋಟೆ ಎಂಬುದಕ್ಕೆ ಸ್ಪಷ್ಟವಾದ ಅರ್ಥ ನೀಡಲು ಸಾಧ್ಯವಾಗಿಲ್ಲದಿದ್ದರೂ ಇತ್ತೀಚೆಗೆ ಕೆಲವು ವಿದ್ವಾಂಸರು ವಿವಿಧ ರೀತಿಯಲ್ಲಿ ಅರ್ಥೈಸಲು ಪ್ರಯತ್ನಿಸಿದ್ದಾರೆ. ಅಂತಹವುಗಳಲ್ಲಿ ಮುಖ್ಯವಾದ ವ್ಯಾಖ್ಯಾನಗಳನ್ನು ಮಾತ್ರ ಈ ಕೆಳಗಿನಂತೆ ಹೇಳಲಾಗಿದೆ.

೧. ಬೆಟಗೇರಿ ಕೃಷ್ಣಶರ್ಮರು: "ಹಿಂದಿನ ಕಾಲದ ರಾಜಕೀಯ ವ್ಯವಸ್ಥೆಗೆ ನಗರ, ಗ್ರಾಮ, ಹಳ್ಳಿ ಪಟ್ಟಣಗಳಿಗೆ ಕೋಟೆಗಳು ಸಂರಕ್ಷಕ ಸಾಧನಗಳಾಗಿದ್ದವು" ಎಂದು ಅಭಿಪ್ರಾಯ ಪಟ್ಟಿದ್ದಾರೆ.[೭]

೨. ರಾಜನೀತಿಸಾರ: "ಅನೇಕ ಗಿಡಮರಗಳ ಪೊದರುಗಳಿಂದ ಕೂಡಿದ, ದನಗಳು, ಹಕ್ಕಿಗಳು, ಇತರ ಪ್ರಾಣಿಗಳಿಂದ ಸಮೃದ್ಧವಾಗಿರುವ, ಜಲಸಂಪತ್ತು ಕೃಷಿಗೆ ಯೋಗ್ಯವಾದ ಭೂಮಿಯಿಂದ ಆವೃತ್ತವಾಗಿರುವ ಪ್ರದೇಶದಲ್ಲಿ ಕೋಟೆಗಳನ್ನು ಕಟ್ಟಬೇಕು." ಎಂದು ಹೇಳಿದೆ.[೮]

೩. ಸಂಕ್ಷಿಪ್ತ ಕನ್ನಡ ನಿಘಂಟು: "ಎತ್ತರವೂ ಬಲತ್ತರವೂ ಆದ ಸುತ್ತುಗೋಡೆ; ಕಿಲ್ಲೆ; ದುರ್ಗ" ಎಂದು ಅರ್ಥೈಸಿದೆ.[೯]

೪. ವಾ.ಸೀ. ಬೇಂದ್ರೆ: ಕೋಟೆ ಎಂದರೆ "ಸಮತಟ್ಟಾದ ನೆಲದ ಮೇಲೆ ಕಟ್ಟಿಕೊಂಡ ಕೋಟೆ" ಎಂದು ಹೇಳಿದ್ದಾರೆ.[೧೦]

೫. ಯಜುರಾರಣ್ಯಕ: "ದುರ್ಗಶಿಲ್ಪವು ಸೂರ್ಯನು ಪೃಥ್ವಿಯನ್ನು ರಕ್ಷಿಸುವಂತೆ ನಮ್ಮ ರಾಜನನ್ನು ಕಾಪಾಡಲಿ" ಎಂದು ಹೇಳುತ್ತದೆ.[೧೧]

೬. ಚನ್ನಬಸಪ್ಪ ಎಸ್. ಪಾಟೀಲ: "ತಮ್ಮನ್ನು ತಮ್ಮ ಸಂಪತ್ತನ್ನು ಕಳ್ಳರಿಂದ ವೈರಿಗಳಿಂದ ಮತ್ತು ಕಾಡು ಪ್ರಾಣಿಗಳಿಂದ ಸಂರಕ್ಷಿಸಿಕೊಳ್ಳಲು ಅವರು ಊರುಗಳ ಸುತ್ತಲು ಕೋಟೆಯನ್ನು ಕಟ್ಟಲು ಪ್ರಾರಂಭಿಸಿದರು.[೧೨]

೭. ಕನ್ನಡ ವಿಶ್ವಕೋಶದಲ್ಲಿ: "ಕೋಟೆಯು ಯುದ್ಧಗತಿಯ ನಿಯಂತ್ರಣ ಕೇಂದ್ರವಾಗಿಯು ಯುದ್ಧ ವ್ಯವಸ್ಥೆಯ ನರಕೇಂದ್ರವಾಗಿ ಪ್ರಾಮುಖ್ಯತೆ ಪಡೆದಿದೆ." ಎಂದು ಹೇಳಲಾಗಿದೆ.[೧೩]

ಹೀಗೆ ಮಾನವ ಅನಾದಿಕಾಲದಿಂದಲೂ ಇಂದಿನವರೆಗೂ ರಕ್ಷಣೆಗಾಗಿ ವಿವಿಧ ತಂತ್ರೋಪಾಯಗಳನ್ನು ಬಳಸಿಕೊಂಡಿರುವುದನ್ನು ನೋಡಬಹುದಾಗಿದೆ. ಒಟ್ಟಾರೆ ಕೋಟೆ ಎಂದರೆ ರಕ್ಷಣಾ ಆವರಣವುಳ್ಳ ನಿರ್ಧಿಷ್ಟವಾದ ಸ್ಥಳ ಎಂದು ಅರ್ಥೈಸಬಹುದು.

### ೩.೩. ಕೋಟೆಯ ಉಗಮ ಮತ್ತು ಬೆಳವಣಿಗೆ

ಕೋಟೆಯ ಉಗಮವು ಮಾನವನ ಪ್ರಾಚೀನ ಕಲೆಗಳಲ್ಲಿ ಒಂದಾಗಿದೆ. ಮಾನವನು ಆರಂಭದಲ್ಲಿ ತನ್ನನ್ನು ರಕ್ಷಿಸಿಕೊಳ್ಳಲು ಶಿಲೆಯ, ಮರದ ಮೊದಲಾದ ಆಯುಧಗಳನ್ನು ಬಳಸುತ್ತಿದ್ದನು. ನಾಗರೀಕತೆ ಬೆಳೆದಂತೆ ಒಂದು ಕಡೆ ನೆಲೆ ನಿಂತ ಮೇಲೆ ತನ್ನ ಮತ್ತು ತನ್ನ ಸಮುದಾಯ, ಸಂಪತ್ತನ್ನು ರಕ್ಷಿಸಿಕೊಳ್ಳಲು ವಿವಿಧ ಪ್ರಕಾರದ ಕೋಟೆಗಳನ್ನು ನಿರ್ಮಿಸಿಕೊಂಡನು. ರಾಜ್ಯಗಳ ಉಗಮವಾದ ನಂತರ ಕಾಲಕಾಲಕ್ಕೆ ರಕ್ಷಣಾ ತಂತ್ರಗಳಲ್ಲಾಗುವ ಬದಲಾವಣೆಗೆ ಅನುಗುಣವಾಗಿ ವಿವಿಧ ಪ್ರಕಾರದ ಕೋಟೆಗಳನ್ನು ನಿರ್ಮಿಸುತ್ತಿದ್ದರು ಎಂಬುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಪ್ರಾಚೀನ ರಾಜನೀತಿಜ್ಞರಿಂದ ನಮೂದಿಸಲ್ಪಟ್ಟಿರುವ ಏಳು ಮೂಲ ಸಪ್ತಾಂಗಗಳಾದ ಸ್ವಾಮಿ, ಅಮಾತ್ಯ, ರಾಷ್ಟ್ರ, ದುರ್ಗ(ಕೋಟೆ), ಕೋಶ, ದಂಡ, ಮಿತ್ರರಾಜ್ಯ ಈ ಮೂಲ ತತ್ವಗಳಲ್ಲಿ ದುರ್ಗ(ಕೋಟೆ) ಬಹುಮುಖ್ಯವೆಂದು ಪರಿಗಣಿಸಲಾಗಿದೆ.[೧೪]

### ೩.೩.೧.ವಿಶ್ವದ ಪ್ರಾಚೀನ ಕೋಟೆಗಳು

ವಿಶ್ವದ ಚರಿತ್ರೆಯಲ್ಲಿ ಕೋಟೆಗಳ ರಚನೆಯು ಕ್ರಿ. ಪೂ. ೩೦೦೦ ವರ್ಷಗಳ ಹಿಂದೆಯೇ ಪ್ರಾರಂಭವಾಗಿದೆ. ಎಂಬುದನ್ನು ಸಂಶೋಧನೆಯಿಂದ ಪತ್ತೆ ಹಚ್ಚಲಾಗಿದೆ. ಕ್ರಿ. ಪೂ. ೭೦೦೦–೬೦೦೦ ಅವಧಿಯಲ್ಲಿ ದಕ್ಷಿಣ ಮೆಸಪಟೋಮಿಯಾದ ಆದಿವಾಸಿಗಳು ಟೈಗ್ರಿಸ್ ಹಾಗೂ ಯೂಫ್ರೇಟಿಸ್ ನದಿಯ ಪ್ರವಾಹದಿಂದ ಮತ್ತು ಕ್ರೂರ ಮೃಗಗಳಿಂದ ರಕ್ಷಣೆ ಪಡೆಯಲು ಮಣ್ಣಿನ ಒಡ್ಡುಗಳನ್ನು ಹಾಕಿರುವುದು ಪತ್ತೆಯಾಗಿದೆ.[೧೫] ಕ್ರಿ. ಪೂ. ೩೦೦೦ದಿಂದ ಏಷಿಯಾಮೈನರ್ ಮತ್ತು ಈಜಿಪ್ಟ್ ದೇಶಗಳಲ್ಲಿ ಯುದ್ಧ ತಂತ್ರದ ಅವಶ್ಯಕತೆಗಳಿಗನುಗುಣವಾಗಿ ಉಪಯೋಗಿಸಲು ಹಾಗೂ ಸೈನಿಕರನ್ನು ರಕ್ಷಿಸಲು ಹಲವು ಬಗೆಯ ಕೋಟೆಗಳನ್ನು ನಿರ್ಮಿಸಲಾಯಿತು. ಅತಿಮುಖ್ಯ ನಗರಗಳಾದ ನಿನೆವಾ, ಬ್ಯಾಬಿಲೋನಿಯ, ಅಸ್ಸೀರಿಯಾ, ಹಿಟ್ಟೈಟ್ ಮತ್ತಿತರ ನಗರಗಳಿಗೆ ೧೩ ಅಡಿ ದಪ್ಪದ ೩೫ ಅಡಿ ಎತ್ತರದ ಕಲ್ಲಿನ ಬಲಿಷ್ಠ ಗೋಡೆಯನ್ನು ನಿರ್ಮಿಸಿದ್ದರೆಂದು ಹೇಳಲಾಗಿದೆ.[೧೬] ಕ್ರಿ.ಪೂ. ೨೦೦೦ಕ್ಕಿಂತಲೂ ಹಿಂದೆಯೇ ಕಟ್ಟಿದ 'ನಿನೆವಾ' ಗೋಡೆಗಳು ೧೫೦ ಅಡಿ ಎತ್ತರ ಮತ್ತು ೩೦ ಅಡಿ ದಪ್ಪ, ಸುತ್ತಳತೆ ೫೦ ಮೈಲು ಇದ್ದು, ಈ ಕೋಟೆಗಳ ಮೇಲೆ ೧೫೦೦ ರಕ್ಷಣಾ ಗೋಪುರಗಳಿದ್ದವೆಂದು ಹೇಳಲಾಗಿದೆ.[೧೭] 'ಅಸ್ಸೀರಿಯನ್ನ'ರ ಒಂದು ಉಬ್ಬುಶಿಲ್ಪ

ದೊರೆತಿದ್ದು ಇದು ಇವರ ರಕ್ಷಣಾ ತಂತ್ರವನ್ನು ತಿಳಿಸುತ್ತದೆ. "ಶತ್ರುನಗರದ ಮೇಲೆ ಮುತ್ತಿಗೆ ಹಾಕುತ್ತಿರುವ ದೃಶ್ಯ. ನಗರದ ಗೋಡೆಯ ಬಳಿ ಗಾಲಿಗಳಿರುವ ಟಗರು ದಿಮ್ಮಿಯನ್ನು ಚರ್ಮ ಮತ್ತು ತಾಮ್ರದ ಆವರಣವುಳ್ಳ ಒಂದು ಮರದ ಸಾಧನದ ಜೊತೆಗೆ ತೂಗಿ ಹಾಕಿದ್ದು, ಇದರಿಂದ ಕೋಟೆಗೋಡೆಗೆ ಗುದ್ದಿ ಗೋಡೆಯನ್ನು ಒಡೆಯಲಾಗುತ್ತಿತ್ತು. ಅವರಲ್ಲೊಬ್ಬ ಮನುಷ್ಯನೆತ್ತರದ ಗುರಾಣಿ ಹಿಡಿದಿದ್ದಾನೆ."[೧೮]

ರೋಮನ್ನರು ಕೋಟೆ ನಿರ್ಮಾಣದ ತಂತ್ರದಲ್ಲಿ ಅತ್ಯಂತ ಪ್ರವೀಣರಾಗಿದ್ದರು. ಅವರು ನಿರ್ಮಿಸಿದ ಹಾರ್ಡಿಯನ್ಸ್ ಗೋಡೆಯು ಒಂದು ಉತ್ತಮ ಉದಾಹರಣೆ. ಈ ಗೋಡೆಯು ಅತ್ಯಂತ ಬೃಹದಾಕಾರದ ಕೋಟೆಯಾಗಿತ್ತಲ್ಲದೆ, ೧೫–೨೦ ಅಡಿ ದಪ್ಪವಿರುವ ಆಯತಾಕಾರದ ಕೋಟೆಯಾಗಿದೆ. ಗೋಡೆಯ ಕಾವಲಿನ ಅವಧಿಗಾಗಿ ನಿರ್ಮಿಸಿದ ವಿಶ್ರಾಂತಿ ತಾಣ, ಪಹರೆದುರ್ಗ, ಕಾಳಿನ ಕಣಜಗಳು, ಅಧಿಕಾರಿಗಳ ಕೊಠಡಿಗಳು, ಮರೆಯಿಂದ ಆಯುಧಗಳನ್ನು ಎಸೆದು ಶತ್ರುಗಳನ್ನು ತಡೆಗಟ್ಟಲು ನೆರವಾಗುವ ಕಿಂಡಿಗಳೂ ಮುಂತಾದವುಗಳನ್ನು ರಕ್ಷಣಾ ದೃಷ್ಟಿಯಿಂದ ನಿರ್ಮಿಸಿದ್ದರು.[೧೯] ರೋಮ್ ನಗರ ಏಳುಗುಡ್ಡಗಳ ಮೇಲೆ ಸ್ಥಾಪಿತವಾಗಿದ್ದು, ಕಾಪಿಟೋಲೈನ್ ಗುಡ್ಡದ ಮೇಲಿನ ದುರ್ಗ ಪ್ರಮುಖವಾದದ್ದಾಗಿತ್ತು. ಶತ್ರುದಾಳಿ ಮಾಡಿದಾಗ ಸುತ್ತಮುತ್ತಲ ನಿವಾಸಿಗಳೆಲ್ಲ ಈ ದುರ್ಗದ ಗೋಡೆಗಳ ಹಿಂದೆ ರಕ್ಷಣೆ ಪಡೆದುಕೊಳ್ಳುತ್ತಿದ್ದರು. ರೋಮನ್ನರು ಶತ್ರುಗಳ ಮೇಲೆ ದಾಳಿ ಮಾಡುವಾಗ ಕವಣೆ ಸಾಧನೆಯನ್ನು ಬಳಸುತ್ತಿದ್ದರು. ಅಂದರೆ ಟಗರು ದಿಮ್ಮಿತುದಿಯಲ್ಲಿರುವ ಲೋಹದ ಕವಚದಿಂದ ಭಾರಿ ಕಲ್ಲು ಗುಂಡುಗಳನ್ನು ಕೋಟೆಗೋಡೆಯನ್ನು ಒಡೆಯಲು ಉಪಯೋಗಿಸುತ್ತಿದ್ದರು. ಕೋಟೆ ಗೋಡೆಯನ್ನು ಹತ್ತಲು ಏಣಿಗಳನ್ನು ಬಳಸುತ್ತಿದ್ದರು.[೨೦] ತ್ಸಿನ್–ಷಿ–ಹುವಾಂಗ್‌ಟಿಯು ಚೀನಾ ದೇಶವನ್ನು ಹುಣರದಾಳಿಯಿಂದ ರಕ್ಷಿಸಲು ಚೀನಾ ಮಹಾ ಗೋಡೆಯನ್ನು ಕ್ರಿ.ಪೂ.೨೨೧ರಲ್ಲಿ ನಿರ್ಮಾಣ ಕಾರ್ಯವನ್ನು ಆರಂಭಿಸಿದನು. ಇವನ ನಂತರ ಬಂದ ಅರಸರು ಅದನ್ನು ಪೂರ್ಣಗೊಳಿಸಿದರು. ಇದರ ಎತ್ತರ ೧೫, ೨೦ ಅಗಲ ಬುಡದಲ್ಲಿ ೨೫ ಮೇಲೆ ೧೫, ೨೦,[೨೧] ಇದ್ದು, ೪೦೦೦ ಕಿ.ಮೀಟರ್ ಉದ್ದದ ಈ ಗೋಡೆಯು ಐದು ಮಂದಿ ಕುದುರೆ ಸವಾರರು ಅದರ ಮೇಲ್ಭಾಗದಲ್ಲಿ ಅಕ್ಕ ಪಕ್ಕದಲ್ಲಿ ಸವಾರಿ ಮಾಡಿಕೊಂಡು ಹೋಗುವಷ್ಟು ವಿಶಾಲವಾಗಿತ್ತು. ಈ ಗೋಡೆಯೇ ಚೀನಾದ ಮಹಾಗೋಡೆ ಎಂದು ಪ್ರಸಿದ್ಧವಾಗಿ ವಿಶ್ವದ ಅದ್ಭುತಗಳಲ್ಲಿ ಒಂದಾಗಿದೆ.[೨೨]

ಕ್ರಿ. ಪೂ. ೬೦೦ರಲ್ಲಿ ಕಾನ್‌ಸ್ಟ್ಯಾಂಟಿನೋಪಲ್ ನಗರದಲ್ಲಿ ೨೨೫ ಕಿ.ಮೀಟರ್ ಉದ್ದದ ಗೋಡೆ, ೬೦ ಅಡಿ ಆಳದ ಕಂದಕವನ್ನು ನಿರ್ಮಿಸಿದರು. ಕೋಟೆ ಗೋಡೆಯ ಮಧ್ಯಭಾಗದಲ್ಲಿ ಕಲ್ಲು, ಮಣ್ಣು, ಇಟ್ಟಿಗೆ, ಹೆಂಡೆ ಮುಂತಾದವುಗಳನ್ನು ತುಂಬಿ ಭರ್ತಿಮಾಡುವುದರೊಂದಿಗೆ ಕೋಟೆಗೋಡೆಯ ದಪ್ಪವನ್ನು ಹೆಚ್ಚಿಸಲಾಗಿದೆ. ರಕ್ಷಣಾದೃಷ್ಟಿಯಿಂದ ಈ ವಿಧಾನ ಮಹತ್ವ ಪೂರ್ಣವಾಗಿದೆ.[೨೩]

### ೩.೩.೨. ಭಾರತದ ಕೋಟೆಗಳು

ಭಾರತದಲ್ಲಿ ಕೋಟೆಗಳ ಇತಿಹಾಸವು ಇತಿಹಾಸ ಪೂರ್ವ ಕಾಲದಿಂದಲೇ ಆರಂಭವಾಗಿದೆ ಎಂದು ಕೆಲವು ವಿದ್ವಾಂಸರು ಇತ್ತೀಚೆಗೆ ಉತ್ಖನನದ ಮೂಲಕ ಪತ್ತೆಹಚ್ಚಿದ್ದಾರೆ. ಅಂತಹ ಪ್ರಮುಖ ನಗರಗಳೆಂದರೆ ಸಿಂಧೂನಾಗರಿಕತೆಯ ಕಾಲದ ಹರಪ್ಪ, ಮೆಹೆಂಜೋದಾರೊ, ಕಾಲಿಬಂಗಾನ್, ರೂಪಾರ್, ಲೋಥಲ್, ಸುರ್‌ಕೋಟ್ ಮುಂತಾದ ಪ್ರದೇಶಗಳಲ್ಲಿ ಕೋಟೆಯ ಅವಶೇಷಗಳು ಪತ್ತೆಯಾಗಿವೆ. ಕೋಟ್‌ದಿಜಿಯಲ್ಲಿ ಸುಮಾರು ಕ್ರಿ.ಪೂ. ೨೪೦೦ರಷ್ಟು ಹಿಂದಿನ ಮಣ್ಣಿನ ಇಟ್ಟಿಗೆ ಗೋಡೆಯೊಂದು ದೊರೆತಿದೆ.[೨೪]

ಹರಪ್ಪದಲ್ಲಿಯ ಕೋಟೆಯ ವೈಶಿಷ್ಟ್ಯವೆಂದರೆ ಆಯತಾಕಾರವಾಗಿ ನಿರ್ಮಿಸಿರುವ ಹೊರಚಾಚಿ ಕೊಂಡಿರುವ ಭಾಗಗಳು ಕೋಟೆಯ ಮುಖ್ಯ ಪ್ರವೇಶದ್ವಾರ ಉತ್ತರಭಾಗದಲ್ಲಿದೆ. ಪಶ್ಚಿಮ ಭಾಗದಲ್ಲಿ ಬುರುಜನಿಂದ ನಿಯಂತ್ರಿತವಾದ, ಕೋಟೆಯೊಳಗಿನ ಬಾಗಿರುವ ಮತ್ತು ಚಾಚಿಕೊಂಡಿರುವ ಭಾಗವು ಕೋಟೆಯ ಹೊರಗಿನ ಇಳಿವೋರೆ ಮತ್ತು ಜಗತಿಗಳಿಗೆ ಸೇರಿಕೊಂಡಿದೆ. ಪ್ರವೇಶದ್ವಾರಗಳ ಮೇಲಿರುವ ಪಹರೆಯ ಕೋಣೆಗಳಿಂದ ವೀಕ್ಷಿಸಲು ಸಾಧ್ಯವಾಗುತ್ತಿತ್ತು.

ಮೆಹೆಂಜೊದಾರೊದಲ್ಲಿ ಕೋಟೆಯು ಹಂತ ಹಂತವಾದ ವೇದಿಕೆಯನ್ನು, ಆಯತಾಕಾರದ ಗೋಪುರಗಳಿಂದ ಕೂಡಿದ ಗೋಡೆಯು ಭದ್ರವಾಗಿ ಹಿಡಿದಿದೆ. ಈ ಗೋಪುರಗಳಲ್ಲಿ ಅತಿ ಮುಂಚಿನದು ೯.೪೫ x ೬.೭೧ ಮೀಟರ್‌ಗಳಷ್ಟಿದೆ. ಈ ಗೋಪುರವನ್ನು ಸುಟ್ಟ ಇಟ್ಟಿಗೆ ಹಾಗೂ ಸಮತಲವಾದ ಮರದ ತುಂಡುಗಳಿಂದ ಭದ್ರಪಡಿಸಿರುವ ತಳಹದಿಯ ಮೇಲೆ ಕಟ್ಟಲಾಗಿದೆ. ಕಾಲಾಂತರದಲ್ಲಿ ಈ ಮರನಶಿಸಿಹೋಗಿ ಕಟ್ಟಡಕ್ಕೆ ಧಕ್ಕೆಯುಂಟುಮಾಡಿತು. ಕೋಟೆಯ ಆಗ್ನೇಯಕ್ಕೆ ಆಯತಾಕಾರದ ಬುರುಜುಗಳಿವೆ. ಇದರ ಸಮೀಪ ಸುಟ್ಟ ಜೇಡಿಯ ಉಂಡೆಗಳು ಬಹುಸಂಖ್ಯೆಯಲ್ಲಿ ದೊರೆತಿವೆ.[೨೫]

ಮೌರ್ಯರ ಕಾಲದಲ್ಲಿ ಭಾರತಕ್ಕೆ ಭೇಟಿ ನೀಡಿದ್ದ ಮೇಗಸ್ತಾನಿಸನು ಪಾಟಲಿಪುತ್ರ ನಗರದ ಬಗ್ಗೆ ಸಾಕಷ್ಟು ಮಾಹಿತಿಗಳನ್ನು ತನ್ನ ಬರವಣಿಗೆಗಳಲ್ಲಿ ದಾಖಲಿಸಿದ್ದನು. ಈ ದಾಖಲೆಯನ್ನು ಆಧರಿಸಿ ೧೯೭೯ರಲ್ಲಿ ಡಾ. ಸ್ಪೂನರ್‌ರವರು ಪಾಟ್ನದಲ್ಲಿ ಉತ್ಖನನ ನಡೆಸಿದ ಮೇಲೆ ಕೋಟೆಯ ಅವಶೇಷಗಳು ದೊರೆತಿವೆ.[೨೬] ಪಾಟಲಿಪುತ್ರ ಅತ್ಯಂತ ದೊಡ್ಡ ನಗರವಾಗಿದ್ದು, ಗಂಗಾ ನದಿಯ ದಡದ ಮೇಲೆ ಉದ್ದಕ್ಕೂ ಹಲವಾರು ಕಿ. ಮೀಟರ್ ಹರಡಿತ್ತು. ನಗರದ ಸುತ್ತ ಆಳವಾದ ಕಂದಕ ಕೋಟೆಯಲ್ಲಿತ್ತು. ಕೋಟೆಗೆ ೬೪ ದ್ವಾರಗಳಿದ್ದವು.[೨೭]

### ೩.೩.೩. ಕರ್ನಾಟಕದ ಕೋಟೆಗಳು

ಕರ್ನಾಟಕದ ಕೋಟೆಗಳ ಇತಿಹಾಸ ಸುಮಾರು ಎರಡು ಸಾವಿರ ವರ್ಷಗಳಷ್ಟು ಸುಧೀರ್ಘ

ಹಾಗೂ ವಿಭಿನ್ನ ಹಿನ್ನೆಲೆ ಹೊಂದಿದೆ. ಅಂದರೆ ಮೌರ್ಯರ ಕಾಲದ ಪ್ರಮುಖ ಪಟ್ಟಣಗಳಾದ ಚಂದ್ರವಳ್ಳಿ ಮತ್ತು ಬ್ರಹ್ಮಗಿರಿಯಿಂದ ಕರ್ನಾಟಕದ ಕೋಟೆಗಳ ಇತಿಹಾಸ ಆರಂಭವಾಗುತ್ತದೆ. ಇಲ್ಲಿಯ ಕೋಟೆಗಳು ಕಲಾಕೌಶಲ್ಯ ಹಾಗೂ ಭದ್ರತೆಯ ದೃಷ್ಟಿಯಿಂದ ಯಾವುದೇ ರೀತಿಯಲ್ಲೂ ಕಡಿಮೆಯಿಲ್ಲ.[೨೮] ಕ್ರಿ. ಶ. ೩ನೇ ಶತಮಾನದಿಂದ ಕ್ರಿ. ಶ. ೪ನೇ ಶತಮಾನದವರೆಗೆ ಆಳ್ವಿಕೆ ಮಾಡಿದ ಶಾತವಾಹನರು ೪೪ x ೨೨ x ೮ ಸೆಂ.ಮಿ. ೩೪ x ೮೭ x ೧೦ x ೨೪ x ೨೪ x ೮ ಸೆಂ.ಮಿ. ೩೨ x ೨೮ x ೧೦ಸೆಂ.ಮಿ. ಅಳತೆಯ ಇಟ್ಟಿಗೆಗಳನ್ನು ಕೋಟೆಯ ನಿರ್ಮಾಣಕ್ಕೆ ಬಳಸಿದ್ದರು ಎಂಬುದಕ್ಕೆ ಕುರುಹಾಗೆ ಸನ್ನತಿ, ಮಾನ್ಯಖೇಟ, ಚಂದ್ರವಳ್ಳಿ, ಬ್ರಹ್ಮಗಿರಿ ಮೊದಲಾದ ಕಡೆ ದೊರೆತಿವೆ.[೨೯] ಶಾತವಾಹನರ ನಂತರ ಆಳ್ವಿಕೆಗೆ ಬಂದ ಅರಸುಮನೆತನಗಳು ರಕ್ಷಣಾ ದೃಷ್ಟಿಯಿಂದ ಭೌಗೋಳಿಕವಾಗಿ ಉತ್ತಮವಾಗಿರುವ, ದಟ್ಟ ಅರಣ್ಯಗಳಲ್ಲಿ, ಬೆಟ್ಟಗುಡ್ಡಗಳ ಮೇಲೆ ಕೋಟೆಗಳನ್ನು ನಿರ್ಮಿಸಲು ಆಸಕ್ತಿವಹಿಸಿದರು.

ಕ್ರಿ. ಶ. ೪ರಿಂದ ೬ನೇ ಶತಮಾನದವರೆಗೆ ಆಳಿದ ಕದಂಬರು ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅಲ್ಲಿಯ ಕೋಟೆಯನ್ನು ಭದ್ರಪಡಿಸಿದರು. ಇವರ ಕಾಲದ ಕೋಟೆಯ ಅವಶೇಷಗಳು ಬನವಾಸಿ ಗುಡ್ನಾಪುರ, ತಾಳಗುಂದ, ಹಲಸಿ ಮುಂತಾದ ಕಡೆ ದೊರೆತಿವೆ. ಬಾದಾಮಿಚಾಳುಕ್ಯರು ಕ್ರಿ. ಶ. ೬ರಿಂದ ೮ನೇ ಶತಮಾನದವರೆಗೆ ಬಾದಾಮಿಯನ್ನು ರಾಜಧಾನಿಯನ್ನಾಗಿಸಿಕೊಂಡು ಆಳಿದರು.[೩೦] ಬಾದಾಮಿಯ ಕೋಟೆಯು ಕರ್ನಾಟಕದ ಪ್ರಪ್ರಥಮ ಶಾಸನೋಕ್ತ ಕೋಟೆ. ಚಾಳುಕ್ಯವಂಶದ ಒಂದನೇ ಪುಲಿಕೇಶಿಯು ಕ್ರಿ.ಶ.೫೪೦ರಲ್ಲಿ ರಾಜಧಾನಿಗೆ ಅಭೇಧ್ಯವಾದ ಕೋಟೆಯನ್ನು ಭದ್ರಪಡಿಸಿದ ಸಂಗತಿ ಶಾಸನದಲ್ಲಿದೆ.[೩೧] ರಾಷ್ಟ್ರಕೂಟರು ಕ್ರಿ. ಶ. ೮ರಿಂದ ೧೦ನೇ ಶತಮಾನದವರೆಗೆ ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕೋಟೆಯನ್ನು ಕಟ್ಟಿಸಿದರು. ಕಲ್ಯಾಣ ಚಾಳುಕ್ಯರು ಯಾದಗಿರಿ, ಬಸವಕಲ್ಯಾಣದಲ್ಲಿ, ಹೊಯ್ಸಳರು ಹಳೇಬೀಡಿನಲ್ಲಿ ವಿಶಾಲವಾದ ಕೋಟೆಯನ್ನು ಕಟ್ಟಿಸಿದರು. ೧೩ನೇ ಶತಮಾನದ ಕೊನೆಯಲ್ಲಿ ಕಾಕತೀಯರಿಂದ ರಾಯಚೂರಿನಲ್ಲಿ ಬಲಿಷ್ಠ ಕೋಟೆ ನಿರ್ಮಾಣವಾಯಿತು.

ವಿಜಯನಗರದ ಅರಸರು ರಕ್ಷಣಾ ದೃಷ್ಟಿಯಿಂದ ಭೌಗೋಳಿಕವಾಗಿ ಆಯಕಟ್ಟಿನ ನೆಲೆಯಾದ ಹಂಪಿಯಲ್ಲಿ ವೈಜ್ಞಾನಿಕ ವಿಧಾನಗಳಿಂದ ಕೋಟೆಯನ್ನು ನಿರ್ಮಿಸಿದರು. ಜೊತೆಗೆ ರಾಯಚೂರಿನ ಹೊಸಕೋಟೆ ಮುದಗಲ್ಲು ಕೋಟೆಯನ್ನು ನವೀಕರಿಸಿದರು. ಇವರ ಸಮಕಾಲೀನ ಮುಸ್ಲಿಂ ರಾಜ್ಯಗಳು ಫಿರೋಜಾಬಾದ್, ಗುಲ್ಬರ್ಗ, ಸಗರ, ಬೀದರ್‌ನಲ್ಲಿ ಕೋಟೆಗಳನ್ನು ಕಟ್ಟಿಸಿದರು. ೧೭ನೇ ಶತಮಾನದಲ್ಲಿ ಸುರಪುರನಾಯಕರು, ವನದುರ್ಗ, ಸುರಪುರ, ವಾಗಣಗೇರಿ ಇಕ್ಕೇರಿಯಲ್ಲಿ ಕೋಟೆ ಕೊತ್ತಲಗಳನ್ನು ನಿರ್ಮಿಸಿದರು. ಹೈದರ್-ಟಿಪ್ಪು ೧೭೬೧ರಿಂದ ೧೭೯೯ರವರೆಗೆ ಆಳ್ವಿಕೆ

ಮಾಡಿದ ಇವರು ಮೈಸೂರು, ಕೃಷ್ಣನಗರ, ಮಂಜರಾಬಾದ್‌ಗಳಲ್ಲಿ ಕೋಟೆಕಟ್ಟಿಸಿ, ಶ್ರೀರಂಗಪಟ್ಟಣ, ದೇವನಹಳ್ಳಿ, ಬಳ್ಳಾರಿ, ಕೊಪ್ಪಳ ಮುಂತಾದ ಕೋಟೆಗಳನ್ನು ಬಲಪಡಿಸಿದರು.

ಅನೇಕ ಪಾಳೆಯಗಾರರು ಸಹ ತಮ್ಮ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಲ್ಲಿ ಕೋಟೆಗಳನ್ನು ಕಟ್ಟಿಸಿದರು. ಪ್ರಮುಖವಾಗಿ ಚಿತ್ರದುರ್ಗ, ಸಿದ್ದಾಪುರ, ಸಿರಾ, ಮಧುಗಿರಿ, ಚನ್ನರಾಯದುರ್ಗ, ನಿಡುಗಲ್ಲು ಮೊದಲಾದ ಪಾಳೆಯಗಾರರು ತಮ್ಮ ವ್ಯಾಪ್ತಿಯಲ್ಲಿ ತಮ್ಮ ಆರ್ಥಿಕ ಶಕ್ತಿಗನುಸಾರವಾಗಿ ಕೋಟೆಗಳನ್ನು ನಿರ್ಮಾಣ ಮಾಡಿದರು.[೩೨] ಹೀಗೆ ಕರ್ನಾಟಕದಲ್ಲಿ ಕೋಟೆಯ ರಚನೆಯ ಹಿಂದೆ ಪ್ರಾದೇಶಿಕ ಪರಿಸರದಲ್ಲಿನ ಭಿನ್ನತೆ, ಹವಾಗುಣ, ರಾಜಕೀಯ ಭದ್ರತೆ, ಆರ್ಥಿಕ ಸಂಪನ್ಮೂಲ, ನೈಸರ್ಗಿಕ ರಕ್ಷಣೆಯ ಅಂಶಗಳನ್ನು ಗಮನಿಸಿರುವುದು ಕಂಡುಬರುತ್ತದೆ. ಕಾಲದಿಂದ ಕಾಲಕ್ಕೆ ಬದಲಾದ ಆಧುನಿಕ ಯುದ್ಧ ತಂತ್ರಕ್ಕೆ ಅನುಗುಣವಾಗಿ ಪ್ರಾಚೀನ ಕದಂಬರಿಂದ ಹಿಡಿದು ವಿಜಯನಗರದವರೆಗೆ ಗುರುತಿಸಬಹುದು.[೩೩] ಕರ್ನಾಟಕದಲ್ಲಿ ಹೆಚ್ಚಾಗಿ ನದಿಬಯಲು, ಬೆಟ್ಟಗುಡ್ಡಗಳ ಪ್ರಾಕೃತಿಕ ಪರಿಸರವನ್ನು ಬಳಸಿಕೊಂಡು ನಿರ್ಮಿಸಿದ ಕೋಟೆಗಳೇ ಹೆಚ್ಚಾಗಿದೆ.[೩೪]

**೩.೩.೪. ನಿಡುಗಲ್ಲು ಪರಿಸರದ ಕೋಟೆಗಳು.**

ನೀಲಾವತಿನಗರ, ಕಾಳಾಂಜನಗಿರಿ, ಕಾಳಾಂಜನಾದ್ರಿ ಎಂದೆಲ್ಲಾ ಪುರಾಣಗಳ ಕಾಲದಿಂದಲೂ ಉಲ್ಲೇಖಿಸಲ್ಪಟ್ಟಿರುವ ನಿಡುಗಲ್ಲು ಬಹುದುರ್ಗಮಯವಾದ ಬೆಟ್ಟವನ್ನು, ನಿಸರ್ಗದತ್ತವಾದ ರಕ್ಷಣಾ ಮಾರ್ಗಗಳನ್ನು ಹೊಂದಿರುವುದರಿಂದ ರಾಜಮಹಾರಾಜರ ಆಳ್ವಿಕೆಗೆ ಹೇಳಿ ಮಾಡಿಸಿದಂತಹ ರಕ್ಷಣಾ ಕೋಟೆಯಾಗಿತ್ತು.[೩೫] ಈ ಪರಿಸರದಲ್ಲಿ ಕೋಟೆಗಳ ಪ್ರಾಚೀನತೆಯನ್ನು ನೊಳಂಬಪಲ್ಲವರ ಕಾಲದಿಂದ ನೋಡಬಹುದು.[೩೬] ಮತ್ತು ನಿಡುಗಲ್ಲಿನಲ್ಲಿ ಮೊದಲ ಬಾರಿಗೆ ಕೋಟೆ ನಿರ್ಮಾಣ ಕಾರ್ಯಕ್ಕೆ ಅಡಿಪಾಯ ಹಾಕಿದರು. ಮೊದಲನೇ ಇರುಂಗೋಳನು ನಿಡುಗಲ್ಲು ಕೋಟೆಯನ್ನು ಕಟ್ಟಿಸಿರುವುದರ ಬಗ್ಗೆ ಶಾಸನಗಳು ಈರೀತಿ ಉಲ್ಲೇಖಿಸುತ್ತವೆ.

ಕಾಳಾಂಜನ ವೆಂಬುದಿರುಂ
ಗೋಳನ ಗಿರಿದುರ್ಗವನ್ತದ ಭ್ರಂಕಾಷತಾ
ಭೀಳತರ ಚೋಳವದರು
ತ್ತಾಳೆತೆಯನೆ ನೋಡಿ ಧಾತ್ರಿ ನಿಡುಗಲ್ಲೆನ್ನುಗಂ....[೩೭]
ಜಗದೀಶ ನಿರುಂಗೊಳಂ
ಸೋಗಯಿಸಿ ತಾನಿರ್ಪ ದುರ್ಗದಂಕಿತ ವದುಂ
ನೆಗೆದು ಗಿರಿಶಿಖರದುಚ್ಚಂ
ಮುಗಿಲು ಮುಟ್ಟಿದೊಡೆ ಪೊಡವಿ ನಿಡುಗಲ್ಲೆಂಗುಂ....[೩೮]

ಮೊದಲನೇ ಇರುಂಗೋಳನಿಂದ ಆರಂಭವಾದ ಕೋಟೆ ನಿರ್ಮಾಣ ಕಾರ್ಯವು ನಿಡುಗಲ್ಲು ನಾಯಕರು, ವಿಜಯನಗರ, ಹರತಿನಾಯಕರ ಆಳ್ವಿಕೆಯವರೆಗೂ ವಿಸ್ತಾರವಾಗಿ ಬೆಳವಣಿಗೆ ಕಂಡಿರುವುದನ್ನು ಕಾಣಬಹುದು. ಹೈದರ್-ಟಿಪ್ಪುವಿನ ದಾಳಿಯಿಂದ ನಿಡುಗಲ್ಲು ಪರಿಸರದಲ್ಲಿ ಬರುವ ಕೋಟೆಗಳು ಧ್ವಂಸವಾಗಿ ಪಾಳೆಯಗಾರರು ಅಧಿಕಾರ ಕಳೆದುಕೊಳ್ಳುವಂತಾಯಿತ್ತು. ಹಲವು ಶಾಸನಗಳಲ್ಲಿ ನಿಡುಗಲ್ಲು ದುರ್ಗವನ್ನು ಕಾಳಾಂಜನಗಿರಿ ಎಂದು ಕರೆದಿದೆ. ಕರ್ನಾಟಕದಲ್ಲೇ ಅತಿದುರ್ಗಮಯವಾದ ಕೋಟೆ ಸಕಲ ಸಂಪತ್ತಿನಿಂದ ಕೂಡಿದ ಕೋಟೆ ಎಂದು ವರ್ಣಿತವಾಗಿದೆ. ಕೋಟೆಯನ್ನು ಪ್ರವೇಶಿಸಲು ಸ್ಥಳೀಯರು ಹೇಳುವಂತೆ ನಿಡುಗಲ್ಲು ಗ್ರಾಮದ ಬಳಿಯಿರುವ ದಕ್ಷಿಣದ 'ಸಿನ್ನಕೋಟೆ' ದ್ವಾರವನ್ನು ಬಳಸಬೇಕಾಗಿದೆ. ಆದರೆ ಕೋಟೆಯ ಮುಖ್ಯದ್ವಾರ ಇರುವುದು ಬೆಟ್ಟದ ಪೂರ್ವಭಾಗದಲ್ಲಿ ಇದನ್ನು ಸ್ಥಳೀಯರು 'ಪಾಗೊಂಡೆ' ಊರಬಾಗಿಲು ಎಂದು ಕರೆಯುತ್ತಾರೆ. ಈ ಮಹಾದ್ವಾರದ ರಚನೆ ಚಿತ್ರದುರ್ಗ ಕೋಟೆ ಮತ್ತು ಗಮ್ಮನಾಯಕನಹಳ್ಳಿ ಕೋಟೆಯ ಮಹಾದ್ವಾರದ ರೀತಿಯೇ ಇದ್ದು, ರಚನಾ ಶೈಲಿ ವಿಸ್ಮಯವನ್ನುಂಟು ಮಾಡುತ್ತದೆ. ಹೊರಗಿನಿಂದ ದಾಳಿಮಾಡುವವರಿಗೆ ಸುಲಭವಾಗಿ ನುಗ್ಗಲು ಆಗದಂತೆ ಅನಿರೀಕ್ಷಿತ ತಿರುವುಗಳಿಂದ ಕೂಡಿದ ಈ ದ್ವಾರವು ವಾಸ್ತುಶೈಲಿಯ ಪ್ರತಿಭೆಯನ್ನು ತೋರಿಸುತ್ತದೆ.[೫೯] ದೂರದಿಂದಲೆ ಕೋಟೆಯ ಗೋಡೆ ರಚನೆಯು ಬೃಹತ್ತಾಗಿ ಕಾಣಿಸುತ್ತದೆ. ಈ ಗೋಡೆಯ ತಳಭಾಗವು ೧೨ ಅಡಿಗಳಷ್ಟು ದಪ್ಪಗಿದ್ದು: ೧೫ ಅಡಿ ಎತ್ತರವಾಗಿದೆ.

ನಿಡುಗಲ್ಲು ಕೋಟೆಯು ಮೇಲುಕೋಟೆ, ನೆಲಗೋಟೆ, ಬೆಸ್ತರ ಕೋಟೆ, ಭೈರವನ ಕೋಟೆ, ಅರಕೋಟೆ, ಚೆನ್ನರಾಯನಕೋಟೆ, ಕಾಳಹಸ್ತೇಶ್ವರನಕೋಟೆ ಎಂಬ ಏಳು ಸುತ್ತಿನ ಕೋಟೆಗಳಿಂದಲೂ, ಪಾವಗಡದ ಊರಬಾಗಿಲು, ಪೆನುಗೊಂಡೆ ಊರಬಾಗಿಲು, ಸಿಂಹಲಯ್ಯನ ದೊಡ್ಡಿಬಾಗಿಲು, ಶೃಂಗಾರದ ಬಾಗಿಲು, ವಜ್ರದ ಊರಬಾಗಿಲು, ಸಿನ್ನ ಅಥವಾ ಸಿರಾ ಊರಬಾಗಿಲು ಎಂಬ ಆರು ಊರು ಬಾಗಿಲುಗಳಿಂದ ಅಲಂಕೃತಗೊಂಡಿದೆ. ಈ ಕಾರಣದಿಂದಾಗಿಯೇ ಜನಪದ ಗೀತೆಗಳಲ್ಲಿ "ಹಕ್ಕಿಹಾರದ ಕೋಟೆ, ಪಕ್ಷಿತೂರದ ಕೋಟೆ" ಎಂದು ಇದನ್ನು ವರ್ಣಿಸಲಾಗಿದೆ.[೬೦] ಕರ್ನಾಟಕದಲ್ಲಿರುವ ಕೋಟೆಗಳಲ್ಲೆಲ್ಲಾ ಅತ್ಯಂತ ವಿಶಾಲವಾದ ಸ್ಥಳವನ್ನು ಹುದುಗಿಸಿಕೊಂಡಿರುವ ಕೋಟೆಯೆಂದರೆ ಇದೊಂದೆ ಆಗಿದೆ. ರಕ್ಷಣೆಯ ದೃಷ್ಟಿಯಿಂದ ತುಂಬ ಚಾಕಚಕ್ಯತೆಯಿಂದ ಕೂಡಿದೆ.[೬೧]

ನಿಡುಗಲ್ಲು ಪರಿಸರದಲ್ಲಿ ಕೆಲವು ಪಾಳೆಯಗಾರರು ತಮ್ಮ ವ್ಯಾಪ್ತಿಗೆ ಸಂಬಂಧಿಸಿದಂತೆ ಕೋಟೆ ಕೊತ್ತಲುಗಳನ್ನು ಕಟ್ಟಿಕೊಂಡು ಸ್ವತಂತ್ರವಾಗಿ ಆಳ್ವಿಕೆ ಮಾಡುತ್ತಿದರು. ಪ್ರಮುಖವಾಗಿ ದೇವರಬೆಟ್ಟ, ಹೊಸಕೋಟೆ, ಬಂಗಾರನಾಯಕನಬೆಟ್ಟ, ಕನ್ನಮೇಡಿ ಮೊದಲಾದವು.

### ೩.೪.ಕೋಟೆಗಳ ಮಹತ್ವ

ನಾಗರಿಕತೆ ಉಗಮವಾದ ನಂತರ ಜನರು ತಮ್ಮ ರಕ್ಷಣೆಯ ದೃಷ್ಟಿಯಿಂದ ನಗರ–ರಾಜ್ಯಗಳ ಉಗಮಕ್ಕೆ ನಾಂದಿಹಾಡಿದರು. ಈ ಬದಲಾವಣೆ ಸಹಜವಾಗಿಯೇ ತನ್ನ ರಾಜ್ಯದ ರಾಜಧಾನಿಯನ್ನು ರಕ್ಷಿಸಲು ಕೋಟೆ ಕೊತ್ತಲುಗಳನ್ನು ಕಟ್ಟಿಕೊಳ್ಳುವಂತೆ ಮಾಡಿತು. ಏಕೆಂದರೆ ಅಸಮರ್ಥ ಜನಸಾಮಾನ್ಯರಿಂದಲೂ ಸಹ ಬಲಿಷ್ಟರಾದ ಶತ್ರುಗಳ ವಿರುದ್ಧ ಹೋರಾಡಲು ಕೋಟೆಗಳು ನೆರವಾಗುತ್ತವೆ. ಎಂಬ ಕಾರಣದಿಂದ ಮತ್ತು ಜೀವನಾವಶ್ಯಕ ಹಾಗೂ ಯುದ್ಧೋಪಕರಣಗಳನ್ನು ಕೋಟೆಯ ಒಳಗೆ ಶೇಖರಿಸಬಹುದೆಂದು ಪ್ರಾಚೀನ ಕಾಲದಿಂದಲೂ ಯಾವ ಅರಸ ಎಷ್ಟು ಸೈನ್ಯವನ್ನು ಹೊಂದಿರುವನು ಎಂಬುದಕ್ಕಿಂತ ಎಷ್ಟು ಅಭೇದ್ಯ ಕೋಟೆಗಳನ್ನು ಹೊಂದಿರುವನು ಎಂಬುದನ್ನು ನೋಡಿ ಅವನ ಶಕ್ತಿ ಸಾಮರ್ಥ್ಯವನ್ನು ನಿರ್ಧರಿಸುತ್ತಿದ್ದರು. ಹೀಗಾಗಿ ಕೋಟೆಯ ನಿರ್ಮಾಣಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಅರಸರು ನೀಡುತ್ತಿದ್ದರು. ಕೋಟೆಗೆ ಶಕ್ತಿ ಸ್ವರೂಪಿಣಿಯಾದ ದುರ್ಗಮಾತೆಯ ಹೆಸರನ್ನು ಇಟ್ಟು 'ದುರ್ಗ' ಎನ್ನುವ ಅನ್ವರ್ಥನಾಮವನ್ನು ಕೋಟೆ ಎಂಬ ಪದಕ್ಕೆ ಬಳಸುತ್ತಿದ್ದರು. ಕೋಟೆಯನ್ನು ಕಟ್ಟುವ ಕಲೆಯು ನಮ್ಮ ನಾಡಿನ ಸಾಂಸ್ಕೃತಿಕ ಹಿರಿಮೆಗಳಲ್ಲಿ ಒಂದಾಗಿದೆ.

ಕಾಡು ಮೃಗಗಳಿಂದ ನೈಸರ್ಗಿಕ ವಿಕೋಪಗಳಿಂದ ರಕ್ಷಣೆ ಪಡೆಯಲು ಕೋಟೆಗಳು ಮಹತ್ವದ ಪಾತ್ರವಹಿಸಿದೆ. ರಾತ್ರಿವೇಳೆಯಲ್ಲಿ ಆಕ್ರಮಣ ಮಾಡಬಹುದಾದ ಹುಲಿ, ಆನೆ, ಕರಡಿ ಮುಂತಾದ ಕ್ರೂರ ಪ್ರಾಣಿಗಳಿಂದ ಸುಲಭವಾಗಿ ತಪ್ಪಿಸಿಕೊಳ್ಳಲು ನಗರ ಹಾಗೂ ಗ್ರಾಮಗಳ ಸುತ್ತ ಎತ್ತರವಾದ ಕಂದಕ ಸಹಿತ ಗೋಡೆಯನ್ನು ನಿರ್ಮಿಸುತ್ತಿದ್ದರು. ಹೀಗಾಗಿ ಸಾಮಾಜಿಕ ಬದುಕಿನಲ್ಲೂ ಸುರಕ್ಷತೆಯ ದೃಷ್ಟಿಯಿಂದ ಕೋಟೆಗಳು ಮಹತ್ವದ ಸ್ಥಾನವನ್ನು ಪಡೆದಿದೆ.

ಕೌಟಿಲ್ಯನ 'ಅರ್ಥಶಾಸ್ತ್ರ', ಕಾಮಂದಕನ 'ನೀತಿಸಾರ', ಕನಕದಾಸರ 'ಮೋಹನತರಂಗಿಣಿ', ಶುಕ್ರನೀತಿಸಾರ, ಲಿಂಗಣ್ಣ ಕವಿಯ 'ಕೆಳದಿ ನೃಪವಿಜಯ', ವಿರುಪಾಕ್ಷಪಂಡಿತನ 'ಚನ್ನಬಸವನ ಪುರಾಣ' ಮುಂತಾದ ಸಾಹಿತ್ಯ ಕೃತಿಗಳು ಕೋಟೆಗಳ ನಿರ್ಮಾಣ ಮತ್ತು ಅವುಗಳ ಮಹತ್ವದ ಬಗ್ಗೆ ವಿವರ ನೀಡುತ್ತವೆ. ಹಾಗೆಯೇ ಅನೇಕ ಶಾಸನಗಳು ಕೂಡ ಕೋಟೆಯ ಮಹತ್ವವನ್ನು ವಿವರಿಸುತ್ತವೆ.

ಶುಕ್ರನು ತನ್ನ ನೀತಿಸಾರದಲ್ಲಿ ಸಪ್ತಾಂಗಗಳನ್ನು ನಮ್ಮ ದೇಹಕ್ಕೆ ಹೋಲಿಕೆ ಮಾಡಿದ್ದಾನೆ. "ರಾಜನು–ತಲೆ, ಮಂತ್ರಿ–ಕಣ್ಣು, ಕಿವಿಗಳು–ಸ್ನೇಹಿತ, ಬೊಕ್ಕಸ–ಮುಖ, ಮನಸ್ಸು–ಸೇನೆ, ದುರ್ಗ–ಕೈಗಳು, ರಾಷ್ಟ್ರ–ಸಮಯ ಹೀಗೆ ಸಪ್ತಾಂಗಗಳಿಂದ ಪೂರ್ಣರಾಜ್ಯವು ಏಳಿಗೆ ಹೊಂದುವುದು" ಎಂದು ಹೇಳಿದ್ದಾನೆ.[೨]

ರಾಜನೀತಿ ಪ್ರಕಾಶನದಲ್ಲಿ ಬೃಹಸ್ಪತಿಯ ವಚನ ಈರೀತಿ ಹೇಳುತ್ತದೆ.

ಆತ್ಮದಾರಾರ್ಥ ಲೋಕಾನಾಂ ಸಂಚಿತಾನಾಂ ತುಗುಪ್ತಯೆ।
ನೃಪತಿಃ ಕಾರಯೇದ್ದುರ್ಗಂ ಪ್ರಕಾರದ್ವಾರ ಸಂಯತಮ್॥

ಅಂದರೆ ರಾಜನು ತನ್ನ ರಾಣಿಯ, ಹಾಗೂ ಜನರ ಮತ್ತು ಸಂಪತ್ತಿನ ರಕ್ಷಣೆಗಾಗಿ ಭದ್ರವಾದ ಗೋಡೆ ಮತ್ತು ಬಾಗಿಲುಗಳುಳ್ಳ ಕೋಟೆಯನ್ನು ಅವಶ್ಯಕವಾಗಿ ಕಟ್ಟಲೇಬೇಕೆಂದು ಹೇಳಿದೆ.[೪೨]

ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ "ತಮ್ಮ ರಾಜ್ಯದ ಸರಹದ್ದಿನ ನಾಲ್ಕುದಿಶೆಗಳಲ್ಲಿರುವ ನೈಸರ್ಗಿಕ ಭೂರಚನೆಯ ಲಾಭ ಪಡೆದು ಯುದ್ಧೋಪಯೋಗಿಯಾಗುವಂಥ ದುರ್ಗಗಳನ್ನು ಕಟ್ಟಬೇಕು. ರಾಜಧಾನಿಗಾಗಿ ಸ್ಥಾನೀಯ ಅಥವಾ ನರದುರ್ಗಗಳನ್ನು ಕಟ್ಟುವಲ್ಲಿ ವಾಸ್ತುವಿನ ಬಗ್ಗೆ ಹೇಳುತ್ತಾ ದೇಶದ ಮಧ್ಯಭಾಗದಲ್ಲಿ ಲೇವಾದೇವಿ ಇರುವಂಥ ನಗರವನ್ನು ನಿರ್ಮಿಸಬೇಕು. ಇಂಥ ವಸತಿ ಪ್ರದೇಶಕ್ಕೆ ಪ್ರಶಸ್ತವಾದ ಸ್ಥಳವೆಂದರೆ, ಯಾವತ್ತೂ ಬತ್ತಿ ಹೋಗದಂಥ ಸರೋವರ ಅಥವಾ ಕೆರೆ ಇಲ್ಲವೆ ನದಿ ಸಂಗಮಗಳ ದಡ. ಆಸ್ಥಳದ ವಿಸ್ತಾರಕ್ಕೆ ಅನುಗುಣವಾಗಿ ಚೌಕ, ಲಂಬಾಕಾರ ಇಲ್ಲವೇ ವರ್ತುಲಾಕಾರದಲ್ಲಿ ನಗರವನ್ನು ನಿರ್ಮಿಸಬಹುದು. ಸುತ್ತಲೂ ನೀರಿರಬೇಕು. ನೀರಿನ ಅಥವಾ ರಸ್ತೆಯ ಮೂಲಕ ಸರಕು-ಸರಂಜಾಮುಗಳನ್ನು ಸಾಗಿಸಲು ಅನುಕೂಲವಿರಬೇಕು. ನಗರದ ನಾಲ್ಕು ಕಡೆ ಕಂದಕಗಳಿರಬೇಕು. ಈ ಕಂದಕಗಳ ಅಗಲವು ೧೪, ೧೨ ಇಲ್ಲವೆ ೧೦ ದಂಡಗಳಷ್ಟಿರಬೇಕು. ಇವುಗಳಲ್ಲಿ ಕಮಲ ಮತ್ತು ಮೊಸಳೆಗಳು ಇರಬೇಕಾದದ್ದು ಅಗತ್ಯ.[೪೪]

ಮನು ಕೋಟೆ ಕುರಿತು ಈ ರೀತಿ ಹೇಳಿದ್ದಾನೆ.

ಏಕಂಶತಂ ಯೋದ್ಯಯತಿ ಪ್ರಾಕಾರ ಸ್ಥೋ ಧನುರ್ಧರಃ।
ಶತಂದಶ ಸಹಸ್ರಾಣಿ ತಸ್ಮಾದ್ದುರ್ಗಂ ವಿಧೀಯತೇ॥

ಅಂದರೆ ಒಬ್ಬ ಬಿಲ್ಲುಗಾರ ಕೋಟೆಯ ಗೋಡೆಯ ಮರೆಯಲ್ಲಿ ನಿಂತು ನೂರಾರು ಶತ್ರುಗಳೊಂದಿಗೆ ಹೋರಾಡಬಹುದು ಮತ್ತು ನೂರಾರು ಬಿಲ್ಲುಗಾರರು ಹತ್ತುಸಾವಿರ ಶತ್ರುಗಳೊಂದಿಗೆ ಹೋರಾಡಬಹುದು.[೪೫]

ಪಂಚತಂತ್ರವು ಕೋಟೆಗಳ ಬಗ್ಗೆ ಈ ರೀತಿ ಉಲ್ಲೇಖಿಸಿದೆ.

ನಗಜಾಸಾಂ ಸಹಸ್ರೇಣ ನ ಚ ಲಕ್ಷೇಣ ವಾಜಿನಾಮ್।
ತತ್ಕರ್ಮ ಸಾಧ್ಯತೇ ರಾಜಾಂ ದುರ್ಗೈಣ್ಯೆಕೇನ ಯದ್ರಣೆ।

ಅಂದರೆ ಯುದ್ಧದಲ್ಲಿ ಸಾವಿರಾರು ಆನೆಗಳಿಂದ ಮತ್ತು ಲಕ್ಷಾಂತರ ಕುದುರೆಗಳಿಂದ ನಿರ್ವಹಿಸಲಾಗದ ಕಾರ್ಯವನ್ನು ಒಬ್ಬ ರಾಜ ಕೋಟೆಯ ಸಹಾಯದಿಂದ ಆಶ್ಚರ್ಯಕರವಾಗಿ ನಿರ್ವಹಿಸಬಲ್ಲನು ಎಂದು ಹೇಳಿದೆ.[೪೬]

ಕೋಟೆ ಇಲ್ಲದ ರಾಜನನ್ನು ವಿಷರಹಿತವಾದ ಹಾವಿನಂತೆ ಅಥವಾ ಮದರಹಿತವಾದ ಆನೆಯಂತೆ ಸುಲಭವಾಗಿ ಸ್ವಾಧೀನ ಪಡಿಸಿಕೊಳ್ಳಬಹುದು ಎಂದು ಶಿವತತ್ವಾ ರತ್ನಾಕರ ಬಸವರಾಜ ಹೇಳುತ್ತಾನೆ.[೪೭]

ಸೋಮದೇವ ವಿರಚಿತಂ ನೀತಿವಾಕ್ಯಮೃತಂದಲ್ಲಿ ಹೇಳಿರುವಂತೆ "ಅ ದುರ್ಗಸ್ಯರಾಜ್ಞ: ಪಯೋಧಿಯಧ್ಯೇ ಪೋತ ಚ್ಯುತ ಪಕ್ಷಿಸಿದಾಪದಿ ಸಾಸ್ತ್ಯಶ್ರಯ" ಅಂದರೆ ದುರ್ಗವಿಲ್ಲದ ರಾಜನಿಗೆ ಕಡಲ ನಡುವೆ ಹಡಗಿನಿಂದ ಹೊರಗೆ ಬಿದ್ದ ಪಕ್ಷಿಯ ಹಾಗೆ ಆಪತ್ತಿನಲ್ಲಿ ಆಶ್ರಯ ವಿರುವುದಿಲ್ಲವೆಂದು ವರ್ಣಿಸಲಾಗಿದೆ.[೪೮]

ಕೋಟೆ ಕೊತ್ತಲಗಳಲ್ಲಿ ಕೇವಲ ರಾಜಮಹಾರಾಜರ ಬದುಕನ್ನಷ್ಟೇ ಕಾಣುವುದಿಲ್ಲ. ಅವುಗಳ ನಿರ್ಮಾಣ ಒಂದು ಜನ ಸಮುದಾಯದ ಸಾಂಸ್ಕೃತಿಕ ಸ್ವರೂಪ ಮತ್ತು ಸಂರಕ್ಷಣೆಯ ಒಟ್ಟು ಸ್ವರೂಪವಾಗಿದೆ. ಒಂದೆಡೆ ಕಲಾತ್ಮಕ ಕ್ರಿಯಾಶೀಲತೆಯನ್ನು ವಿಶಿಷ್ಟವಾಗಿ ಮನಗಾಣಿಸುತ್ತಲೇ ಮತ್ತೊಂದೆಡೆ ಸಂಕೀರ್ಣ ಸಂದರ್ಭದಲ್ಲಿ ತನ್ನ ಸಂರಕ್ಷಣೆಗಾಗಿ ಮನುಷ್ಯರು ಏನೆಲ್ಲ ಮಾಡುತ್ತಾ ಬಂದಿದ್ದಾರೆ. ಎಂಬುದರ ಗಂಭೀರ ಅರಿವನ್ನು ತಂದು ಕೊಡುತ್ತದೆ. ಇಲ್ಲಿ ಸಂತೋಷವಿದೆ, ಸಂತೃಪ್ತಿಯಿದೆ, ಬೇಗುದಿಯಿದೆ, ಯುದ್ಧ ಹೋರಾಟವಿದೆ. ಮತ್ತು ಜೀವನ ಎಷ್ಟು ಗಂಭೀರ ಮತ್ತು ಸೂಕ್ಷ್ಮವಾದುದು ಎಂಬುದರ ಸಂಕಥನವಿದೆ.[೪೯] ಅಂತೆಯೇ ಆರ್. ಶೇಷಶಾಸ್ತ್ರಿ "ಕೋಟೆ ಎಂಬುದು ಅಂದಿನ ರಾಜಕೀಯ ವ್ಯವಸ್ಥೆಯ ಮತ್ತು ಜನತೆಯ ರಕ್ಷಣೆಯ ಭಾರವನ್ನು ಹೊತ್ತಿದ್ದು. ಕೋಟೆಯ ಬಲದ ಮೇಲೆ ಅಳಿವು ಉಳಿವು ಅವಲಂಬಿಸಿರುತ್ತಿತ್ತು." ಎಂದು ಹೇಳುವ ಮೂಲಕ ಕೋಟೆಯ ಮಹತ್ವವನ್ನು ತಿಳಿಸಿದ್ದಾರೆ. ಯುದ್ಧ ಸಮಯದಲ್ಲಿ ವಿಜಯ ಒದಗುವಂತೆ ಯುದ್ಧೋಪಕರಣಗಳು ಮತ್ತು ಕೋಟೆ ಮೊದಲಾದವುಗಳಿಗೆ ಪೂಜೆಮಾಡಿ ಅನಂತರ ಶೌರ್ಯ, ಸಾಹಸ, ಆತ್ಮಾಭಿಮಾನವನ್ನು ಹುರಿದುಂಬಿಸಿ ಯುದ್ಧರಂಗಕ್ಕೆ ಹೊರಡುತ್ತಿದ್ದರು.[೫೦]

## ೩.೫. ಕೋಟೆಯ ಲಕ್ಷಣಗಳು

ಕೋಟೆ ಎಂದರೆ ಕೇವಲ ಗೋಡೆಯಲ್ಲ. ಗೋಡೆಯು ಸೇರಿದಂತೆ ಇತರೆ ಅಂಗಭಾಗಗಳು ಇರುವುದನ್ನು ಕಾಣಬಹುದು. ಈ ಅಂಗಭಾಗಗಳ ಬಗ್ಗೆ ಶಾಸನಗಳಲ್ಲಿ ವಿರಳ ಮಾಹಿತಿಯಿದ್ದರೂ, ಸಾಹಿತ್ಯಿಕ ಗ್ರಂಥಗಳು ವಿಪುಲವಾದ ಮಾಹಿತಿಯನ್ನು ನೀಡುತ್ತವೆ. ಈ ಕೃತಿಗಳು ಕೋಟೆಯ ವಾಸ್ತು, ರಚನಾಕ್ರಮ, ವಿನ್ಯಾಸ, ಪ್ರಕಾರಗಳು, ಅಂಗಭಾಗಗಳ ಬಗ್ಗೆ ಮಹತ್ವದ ವಿಷಯಗಳನ್ನು ತಿಳಿಸುತ್ತವೆ.

ಶಿಲ್ಪಶಾಸ್ತ್ರಗಳಲ್ಲಿ ಪ್ರತಿಪಾದಿಸಿರುವಂತೆ ರಕ್ಷಣಾವಾಸ್ತುಶಿಲ್ಪವು ವಪ್ರ (ಮಣ್ಣಿನ ಇಳಿವೋರೆ), ಪರಿಕೆ (ಕಂದಕ ಅಥವಾ ಅಗಳು), ಕೋಟೆತೆನೆ, ಪ್ರಾಕಾರ (ಆಳ್ವೇರಿ), ಮುಗಿಲಟ್ಟಣೆ, ಕೊತ್ತಲ

(ಬುರುಜು), ಕೋಟೆಯ ಬಾಗಿಲು, ಕೋಟೆಯ ಕದ, ದಿಡ್ಡಿ, ಕೋಟೆಯ ಮೇಲಿನ ಉಪಕರಣಗಳು ಮುಂತಾದ ಅಂಗಭಾಗಗಳನ್ನು ಹೊಂದಿರುವ ಸ್ಥಳವೇ ಕೋಟೆ.

### ೩.೫.೧. ವಪ್ರ

ಕೋಟೆ ಗೋಡೆಯ ಎತ್ತರಕ್ಕೆ ಒಳ ಅಥವಾ ಹೊರ ಭಾಗದಲ್ಲಿ ಇಳಿಜಾರಾಗಿರುವ ಇಳಕಲ್ಲು ಮತ್ತು ಮಣ್ಣಿನ ಇಳಿವೋರೆಗೆ ವಪ್ರ ಎಂದು ಕರೆಯಲಾಗುತ್ತದೆ. ಕೋಟೆಯ ನೆಲವು ಸಮಾನ ತರವಾಗಿ ನಗರವನ್ನು ಸುತ್ತುವರೆದಿರಬೇಕು. ವಪ್ರವನ್ನು ನಿರ್ಮಿಸಲು ಆಯ್ಕೆ ಮಾಡಿದ ನಿವೇಶನದ ಸುತ್ತಲೂ ಕಂದಕವನ್ನು ತೋಡಬೇಕು. ಅಗೆಯಲ್ಪಟ್ಟ ನೆಲದ ಮಣ್ಣನ್ನು ಹೆಚ್ಚಿನ ಪ್ರಮಾಣದಲ್ಲಿ ಕಂದಕದ ಒಳಗೋಡೆಗೆ ಇಳಿಜಾರಾಗಿ ಎತ್ತರವಾದ ದಿಬ್ಬವನ್ನು ನಿರ್ಮಿಸಲು ಬಳಸಬೇಕು. ನಂತರ ಸ್ವಲ್ಪ ಮಣ್ಣನ್ನು ಕಂದಕಗಳ ಹೊರಭಾಗದಲ್ಲಿ ಇಳಿಜಾರಾದ ಇಳು ವೋರೆಗಳನ್ನು ನಿರ್ಮಿಸಲು ಬಳಸಬೇಕು. ಉಳಿದ ಮಣ್ಣನ್ನು ಪಟ್ಟಣದೊಳಗೆ ಇರುವ ಕುಳಿಗಳನ್ನು ಮುಚ್ಚಲು ಹಾಗೂ ರಸ್ತೆ ನಿರ್ಮಾಣಕ್ಕೆ ಉಪಯೋಗಿಸಿಕೊಳ್ಳಬೇಕು. ಹೀಗೆ ತುಂಬಿದ ಮಣ್ಣನ್ನು ಎತ್ತುಗಳ ಸಹಾಯದಿಂದ ಹದಗೊಳಿಸಬೇಕು.[೫೧] ನಿಡುಗಲ್ಲು ಪರಿಸರದಲ್ಲಿ ಇಂತಹ ಇಳಕಲ್ಲು ಮತ್ತು ಮಣ್ಣಿನ ಇಳಿ ವೋರೆಗಳಿರುವುದನ್ನು ಕಾಣಬಹುದಾಗಿದೆ.

ವಪ್ರಗಳನ್ನು ಹಲವು ಕಾರಣಗಳಿಗಾಗಿ ನಿರ್ಮಿಸುತ್ತಾರೆ. ಶತ್ರುಗಳು ಕೋಟೆಯನ್ನು ಸುಲಭವಾಗಿ ಸಮೀಪಿಸದಂತೆ ತಡೆಯಲು ಅವರು ಬಳಸಿದ ಬಿಲ್ಲು, ಬಾಣ, ಮದ್ದು ಗುಂಡುಗಳು ಮೊದಲಾದ ಆಯುಧಗಳು ನೇರವಾಗಿ ಕೋಟೆಯ ಗೋಡೆಗೆ ತಗುಲಿ ಗೋಡೆಯು ಹಾಳಾಗದಂತೆ ತಡೆಯಲು ಮತ್ತು ಶತ್ರುಗಳಿಂದ ಎಸೆಯಲ್ಪಟ್ಟ ಆಯುಧಗಳು ಮಣ್ಣಿನಲ್ಲಿ ಸಿಕ್ಕಿ ಹಾಕಿಕೊಳ್ಳಲು ಹಾಗೂ ಅವರು ಎಸೆದ ಆಯುಧಗಳು ಅವರಿಗೆ ಹಿಂದಕ್ಕೆ ಚಿಮ್ಮುವಂತೆ ಮಾಡುವುದಾಗಿತ್ತು. ಕೆಲವೊಮ್ಮೆ ಇಳಕಲ್ಲು ಪ್ರದೇಶದಲ್ಲಿ ಮುಳ್ಳಿನ ಪೊದೆಗಳನ್ನು ವಿಪುಲವಾಗಿ ಬೆಳೆಸಿ ಕೋಟೆಯ ಗೋಡೆ ಹಾಗೂ ಕೋಟೆಯ ಒಳಗಿನ ಪ್ರದೇಶವನ್ನು ಕಾಣದಂತೆ ಮಾಡುತ್ತಿದ್ದರು. ಹೀಗೆ ರಕ್ಷಣೆಯ ದೃಷ್ಟಿಯಿಂದ ವಿವಿಧ ಕಾರಣಗಳಿಗಾಗಿ ವಪ್ರವನ್ನು ನಿರ್ಮಿಸಲಾಗುತ್ತದೆ.

### ೩.೫.೨. ಕಂದಕಗಳು



ಕಂದಕವು ಕೋಟೆಯ ಮತ್ತೊಂದು ಪ್ರಮುಖ ಭಾಗವಾಗಿದೆ. ವಪ್ರವನ್ನು ನಿರ್ಮಿಸಿದಾಗ ಸಹಜವಾಗಿ ಆಳವಾದ ತಗ್ಗು ಏರ್ಪಡುತ್ತದೆ. ಇಂತಹ ತಗ್ಗು ಪ್ರದೇಶದಲ್ಲಿ ಸಡಿಲವಾದ ಮಣ್ಣನ್ನು ತೆಗೆದುಹಾಕಿ ಎರಡೂ ಕಡೆ ಇಟ್ಟಿಗೆ ಅಥವಾ ಕಲ್ಲುಗಳಿಂದ ಗೋಡೆಯನ್ನು ನಿರ್ಮಿಸುವರು. ಈ ಕಂದಕಗಳಿಗೆ ನದಿ, ಅಣೆಕಟ್ಟು, ಕೆರೆ, ಕಾಲುವೆ, ಬಾವಿಗಳಿಂದ ಕೆಲವೊಮ್ಮೆ ಚರಂಡಿ ನೀರನ್ನು ಬಿಡಲಾಗುತ್ತದೆ. ಕಂದಕ ಮತ್ತು ಗೋಡೆಯ ಮಧ್ಯೆ ಅನಗತ್ಯ ಸ್ಥಳವಿರುವುದಿಲ್ಲ.

ಕಂದಕವು ಯಾವಾಗಲು ಬುಡಭಾಗಕ್ಕಿಂತಲು ಮೇಲ್ಭಾಗದಲ್ಲಿಯೇ ಹೆಚ್ಚು ಅಗಲವಿರುತ್ತದೆ. ಸಾಮಾನ್ಯವಾಗಿ ಕಂದಕಗಳಿಗೆ ನದಿ ತೀರ ಪ್ರದೇಶಗಳು ಹೇಳಿ ಮಾಡಿಸಿದಂತಿರುತ್ತವೆ. ಏಕೆಂದರೆ ಕೋಟೆಗೆ ಒಂದು ಪಾರ್ಶ್ವದಲ್ಲಿ ನದಿಯೇ ದೊಡ್ಡ ಕಂದಕವಾಗಿರುತ್ತದೆ. ಉಳಿದ ಕಡೆ ಕೋಟೆ ಗೋಡೆಯ ಸುತ್ತ ಆಳವಾದ ಕಂದಕವನ್ನು ತೋಡಿ ಕಾಲುವೆಯ ಮೂಲಕ ನೀರನ್ನು ಹರಿಸಬಹುದಾಗಿತ್ತು.

ಹೀಗೆ ವಿಸ್ತಾರವಾದ ಕಂದಕಗಳು ಶತ್ರುಗಳಿಗೆ ಸಿಂಹಸ್ವಪ್ನವಾಗಿರುತ್ತವೆ. ಏಕೆಂದರೆ ಶತ್ರುಗಳು ತಾವು ಎಸೆದ ಮದ್ದುಗುಂಡು, ಬಿಲ್ಲುಬಾಣಗಳು ಕೋಟೆಯ ಸಮೀಪ ಬಂದಂತೆ ಅವು ವೇಗವನ್ನು ಕಳೆದುಕೊಂಡು ಕಂದಕದಲ್ಲಿ ಬೀಳುತ್ತಿದ್ದವು. ಕಂದಕದ ಅಂಚಿನಲ್ಲಿ ನಿಂತು ಬಾಣ ಬಿಡಲು ಬಂದರೆ ಕೋಟೆಯ ಮೇಲ್ಭಾಗದಲ್ಲಿರುವ ಸೈನಿಕರ ಬಾಣಗಳು ಬೇಗ ತಾಗುತ್ತವೆ. ಹೀಗೆ ರಕ್ಷಣೆಯ ದೃಷ್ಟಿಯಿಂದ ಕಂದಕಗಳು ಮಹತ್ವದ ಪಾತ್ರವಹಿಸುತ್ತಿದ್ದವು.

ಕಂದಕಗಳು ಸುಂದರವಾಗಿ ಕಾಣಲೆಂದು ಕಮಲ, ಹೂಗಿಡಗಳು ಮತ್ತು ಹಸಿರು ಹೂಬಳ್ಳಿಗಳನ್ನು ಬೆಳೆಸುತ್ತಿದ್ದರು. ಏಕೆಂದರೆ ಶತ್ರುಗಳನ್ನು ಮೋಸಮಾಡುವುದು ಇದರ ಉದ್ದೇಶವಾಗಿತ್ತು. ಇಂತಹ ಕಂದಕಗಳಿಂದ ಶತ್ರುಗಳು ಈಜಿಬರದಂತೆ ಅಪಾಯಕಾರಿ ಹಾವು, ಮೊಸಳೆ ಮುಂತಾದ ಜಲಚರಗಳನ್ನು ಕಂದಕಗಳಿಗೆ ಬಿಡುತ್ತಿದ್ದರು. ಕೋಟೆಗೆ ಹೋಗಲು ಕಿರಿದಾದ ರಸ್ತೆಯು ಕಂದಕದಲ್ಲಿತ್ತು. ಈ ಭಾಗದಲ್ಲಿ ಬಲಿಷ್ಟ ಕಾವಲು ಪಡೆಯನ್ನು ಇಡುತ್ತಿದ್ದರು. ಕೋಟೆ ಕಾಳಗದ ಸಮಯದಲ್ಲಿ ಈ ಕಂದಕಗಳಿಗೆ ಹುಲ್ಲಿನ ಹೊರೆ ಕಲ್ಲು ಮಣ್ಣನ್ನು ಹಾಕುತ್ತಿದ್ದರು. ಇದೇ ಸಮಯದಲ್ಲಿ ಕೋಟೆಯ ಮೇಲ್ಭಾಗದಿಂದ ಪ್ರತಿ ದಾಳಿಯನ್ನು ಮಾಡುತ್ತಿದ್ದರು.[೫೨]

ಇಂತಹ ಕಂದಕಗಳು ನಿಡುಗಲ್ಲು ಪರಿಸರದ ಗಿರಿದುರ್ಗಗಳಲ್ಲಿ ಕಾಣಬಹುದಾಗಿದೆ. ಗಿರಿದುರ್ಗಗಳಲ್ಲಿ ನೀರನ್ನು ನಿಲ್ಲಿಸುವುದು ಕಷ್ಟವಾದ್ದರಿಂದ ನೀರು ಹರಿಯುವ ಕಡೆ ಕೋಟೆಯ ಗೋಡೆಯನ್ನು ಎತ್ತರವಾಗಿ ಕಟ್ಟುತ್ತಿದ್ದರು. ಇಲ್ಲಿ ಶೇಖರಗೊಂಡ ನೀರನ್ನು ಕಂದಕಗಳಿಗೆ ಬಿಡುತ್ತಿದ್ದರು. ಈ ಗೋಡೆಯನ್ನು ಹತ್ತಿದರೆ ಶತ್ರುಗಳು ಕಂದಕದಲ್ಲಿ ಬೀಳುತ್ತಿದ್ದರು. ಈ ಕಂದಕದಿಂದ ಮೇಲೆ ಬರದಂತೆ ಎತ್ತರವಾದ ಕಲ್ಲಿನ ಗೋಡೆಯನ್ನು ನಿರ್ಮಿಸಿದ್ದಾರೆ. ಈ ಗೋಡೆಯ ಮೇಲ್ಭಾಗದಲ್ಲಿ ಸೈನಿಕರ ಕಾವಲು ಪಡೆ ಯಾವಾಗಲು ಇರುತ್ತಿತ್ತು. ಹೀಗೆ ಶತ್ರುಗಳು ಮಾಡಬಹುದಾದ ದಾಳಿಯನ್ನು ವಿಳಂಬಗೊಳಿಸುವುದಕ್ಕಾಗಿ ಈ ಎಲ್ಲಾ ತಂತ್ರೋಪಾಯಗಳು ನಿಡುಗಲ್ಲು ಕೋಟೆಯಲ್ಲಿವೆ.

### ೩.೫.೩. ಕೋಟೆಯ ಗೋಡೆ

ಕೋಟೆ ಗೋಡೆಯನ್ನು 'ಶಾಲ', 'ಆಳ್ವೆರಿ' ಎಂತಲೂ ಕರೆಯುತ್ತಾರೆ. ಕೋಟೆಗೋಡೆಯನ್ನು ಕನ್ನಡ ನಿಘಂಟುನಲ್ಲಿ ಎತ್ತರವೂ, ಬಲತ್ತರವೂ ಆದ ಗೋಡೆ ಎಂದು ಅರ್ಥೈಸಲಾಗಿದೆ. ಕೋಟೆಯ ಗೋಡೆಯ ಬಗ್ಗೆ ಕೌಟಿಲ್ಯನು ವಪ್ರದ ಮೇಲೆ ಅದರ ವಿಸ್ತಾರಕ್ಕೆ ಎರಡರಷ್ಟು ಎತ್ತರವಿರುವಂತೆ ಇಟ್ಟಿಗೆಗಳಿಂದ ಹನ್ನೆರಡು ಮೊಳ ಪ್ರಮಾಣಗಳಿಂದ ಹಿಡಿದು ಇಪ್ಪತ್ನಾಲ್ಕು ಮೊಳ ಪ್ರಮಾಣಗಳವರೆಗೆ ಸಮಸಂಖ್ಯೆಯಲ್ಲಾಗಲೀ, ವಿಷಮ ಸಂಖ್ಯೆಯಲ್ಲಾಗಲೀ ಕೋಟೆಯ ಪ್ರಾಕಾರ (ಗೋಡೆ)ಯನ್ನು ನಿರ್ಮಿಸಬೇಕು ಎಂದಿದ್ದಾನೆ.[೫೩] ಸಾಮಾನ್ಯವಾಗಿ ಕೋಟೆಗೋಡೆಯ ಗಾತ್ರಕ್ಕೆ ತಕ್ಕಂತೆ ದ್ವಾರಬಾಗಿಲು ಗಳಿರುತ್ತವೆ. ರಕ್ಷಣಾ ವಿಧಾನಗಳಾದ, ಕಿಟಕಿ ಕಾವಲುಗೋಪುರ, ಗೋಡೆರಂಧ್ರ, ಕೋಟೆಯ ಕೈಪಿಡಿ, ಫಿರಂಗಿ, ಕವಾಯಿತು ಗೋಡೆ, ಕಂದಕದ ಉದ್ದಕ್ಕೂ ಇರುವ ಗೋಡೆ, ಸುರಂಗ, ಗುಪ್ತಮಾರ್ಗ, ಕೊತ್ತಲ ಮೊದಲಾದವುಗಳು ಈ ಗೋಡೆಗೆ ಹೊಂದಿಕೊಂಡಂತೆ ಇರಬೇಕು.

ನಿಡುಗಲ್ಲು ಕೋಟೆಯ ಗೋಡೆಯನ್ನು ಮಣ್ಣು, ಇಟ್ಟಿಗೆ ಮಿಶ್ರಣ ಹಾಗೂ ಕಲ್ಲು, ಇಟ್ಟಿಗೆಗಳಿಂದ ನಿರ್ಮಿಸಲಾಗಿದೆ. ಈ ಗೋಡೆಗಳು ಕೆಳಭಾಗದಲ್ಲಿ ದಪ್ಪವಾಗಿದ್ದು, ಮೇಲ್ಭಾಗದಲ್ಲಿ ತೆಳುವಾಗಿದೆ. ಈ ಗೋಡೆಗಳ ಮೇಲೆ ಸಿಂಹ, ಆನೆ, ಹಾವು, ಮೀನು, ಸೈನಿಕರ, ಕುದುರೆ, ಹುಲಿ, ಮಿಥುನ, ಶಿಲ್ಪ, ಸೈನ್ಯ ಮೊದಲಾದ ಶಿಲ್ಪಗಳನ್ನು ಚಿತ್ರಿಸಿದ್ದಾರೆ. ಈ ಗೋಡೆ ತಳಭಾಗದಲ್ಲಿ ೧೨ ಅಡಿ ದಪ್ಪವಿದ್ದು ೧೫ ಅಡಿ ಎತ್ತರವಾಗಿದೆ. ಈ ರೀತಿ ಎತ್ತರವಾದ ಕೋಟೆಯ ಗೋಡೆಯನ್ನು ಕಟ್ಟುವುದು ಶತ್ರುಗಳ ಆಕ್ರಮಣವನ್ನು ತಡೆಯಲು ಮತ್ತು ಕೋಟೆಯ ಕಾಳಗದ ಸಮಯದಲ್ಲಿ ಶತ್ರುಗಳನ್ನು ಗೋಡೆಗಳ ಮೇಲಿಂದ ಕಂದಕಕ್ಕೆ ತಳ್ಳುವುದಕ್ಕಾಗಿ ನಿರ್ಮಿಸುತ್ತಿದ್ದರು. ಇಂತಹ ಗೋಡೆಗಳಿಗೆ ರಕ್ಷಣೆಯನ್ನು ನೀಡಲು ಒಳಭಾಗದಲ್ಲಿ ಕಲ್ಲು ಮಣ್ಣು ಮಿಶ್ರಿತ ಹಾಗೂ ಮಣ್ಣಿನಿಂದ ಇಳಿವೊರೆಗಳನ್ನು ನಿರ್ಮಿಸಿದ್ದಾರೆ. ಶತ್ರುಗಳು ಎಸೆದ ಕಲ್ಲು-ಗುಂಡು, ಮದ್ದುಗುಂಡುಗಳು ಗೋಡೆಗೆ ತಗುಲಿ ಗೋಡೆಯು ಹಾಳಾಗಬಾರದೆಂದು ಇಳಿವೋರೆಗಳನ್ನು ನಿರ್ಮಿಸಿದ್ದಾರೆ. ಗೋಡೆಯ ಮೇಲ್ಭಾಗದಲ್ಲಿ ಸೈನಿಕರು ಓಡಾಡಲು ವಿಶಾಲ ಜಾಗವಿದೆ. ಮಳೆಯ ನೀರು ಹರಿದು ಹೋಗಲು ರಂಧ್ರಗಳನ್ನು ಕೊರೆಯಲಾಗಿದೆ. ಇದೇ ರೀತಿಯ ಗೋಡೆಗಳನ್ನು ದೇವರಬೆಟ್ಟ, ಕನ್ನಮೇಡಿ, ಹೊಸಕೋಟೆಗಳಲ್ಲಿ ಕಾಣಬಹುದಾಗಿದೆ.

ಪಂಪನು ವಿಕ್ರಮಾರ್ಜುನ ವಿಜಯಂನಲ್ಲಿ ಹಸ್ತಿನಾಪುರವನ್ನು ವರ್ಣಿಸುತ್ತಾ ಕೋಟೆಯ ಗೋಡೆಯ ಬಗ್ಗೆ ಉಲ್ಲೇಖ ಮಾಡಿದ್ದಾನೆ.[೫೪]

### ೩.೫.೪. ಕೋಟೆಯ ತೆನೆ

ಕೋಟೆಯ ಗೋಡೆಯ ಮೇಲ್ಭಾಗದಲ್ಲಿ ಗೋಡೆಯ ಉದ್ದಕ್ಕೂ ಮಣ್ಣಿನಿಂದ ಮಾಡಿದ

ತೆನೆಯಿರುವುದನ್ನು ನಿಡುಗಲ್ಲು ಕೋಟೆಯಲ್ಲಿ ಕಾಣಬಹುದಾಗಿದೆ. ಸಾಮಾನ್ಯವಾಗಿ ತೆನೆಯನ್ನು ಶತ್ರುಗಳ ಚಲನವಲನವನ್ನು ವೀಕ್ಷಿಸಲು ಹಾಗೂ ತೆನೆಯಲ್ಲಿರುವ ರಂಧ್ರಗಳ ಮೂಲಕ ಬಾಣಗಳನ್ನು ಶತ್ರುಗಳಿಗೆ ಬಿಡಲು ಉಪಯೋಗಿಸುತ್ತಿದ್ದರು. ತೆನೆಗಳಿರುವುದರಿಂದ ಶತ್ರುಗಳಿಗೆ ಕೋಟೆಯಲ್ಲಿ ಇರುವ ಸೈನಿಕರ ಚಲನವಲನಗಳು ತಿಳಿಯುತ್ತಿರಲಿಲ್ಲ. ತೆನೆಗಳಿಂದ ಕೆಲವೊಮ್ಮೆ ಸೈನಿಕರಿಗೆ ಹಾನಿಯಾಗುವ ಸಂಭವವಿರುತ್ತಿತ್ತು. ಏಕೆಂದರೆ ಶತ್ರುಗಳು ಕಲ್ಲುಗುಂಡುಗಳನ್ನು ಎಸೆದಾಗ ತೆನೆಯು ಮುರಿದು ತೆನೆಯ ಹಿಂದೆ ಇದ್ದ ಸೈನಿಕರು ಕಾಣುವಂತೆ ಮಾಡುತ್ತಿತ್ತು. ಆಗ ಶತ್ರುಗಳು ಸೈನಿಕರ ಮೇಲೆ ಸುಲಭವಾಗಿ ದಾಳಿ ಮಾಡಬಹುದಿತ್ತು. ಕೆಲವು ಸಲ ಶತ್ರುಗಳು ಕೋಟೆಯನ್ನು ಹತ್ತುವಾಗ ಸೈನಿಕರು ಈ ತೆನೆಗಳನ್ನೇ ಅಸ್ತ್ರವನ್ನಾಗಿ ಮಾಡಿಕೊಂಡು ಶತ್ರುಗಳನ್ನು ಕಂದಕಕ್ಕೆ ತಳ್ಳುತ್ತಿದ್ದರು.

**೩.೫.೫. ಬಂದೂಕು ರಂಧ್ರಗಳು (ಅಂಬುಗಂಡಿಗಳು)**

ಸಾಮಾನ್ಯವಾಗಿ ಕೋಟೆಯ ಗೋಡೆಗೆ ರಕ್ಷಣೆಯ ದೃಷ್ಟಿಯಿಂದ ರಂಧ್ರಗಳನ್ನು ವಿವಿಧ ಕೋನಗಳಲ್ಲಿ ನಿರ್ಮಿಸುತ್ತಿದ್ದರು. ನಾಗಚಂದ್ರನು 'ರಾಮಚಂದ್ರಚರಿತ ಪುರಾಣ'ದ ೧೧ನೇಯ ಭಾಗದ ೧೧೬ನೇ ಪದ್ಯದಲ್ಲಿ ಅಂಬುಗಂಡಿಗಳ ಬಗ್ಗೆ ಉಲ್ಲೇಖಮಾಡಿದ್ದಾನೆ. ಈತನ ಪ್ರಕಾರ ಅಂಬುಗಂಡಿ ಎಂದರೆ "ಒಳಗಿನಿಂದ ಬಾಣಬಿಡುವುದಕ್ಕಾಗಿ ಕೋಟೆಯ ಗೋಡೆಯಲ್ಲಿ ರಚಿಸಿದ ಕಿಂಡಿ."[೫೫] ಪ್ರಾರಂಭದಲ್ಲಿ ಈ ಕಿಂಡಿಗಳನ್ನು ಬಾಣಗಳನ್ನು ಬಿಡಲು ಉಪಯೋಗಿಸುತ್ತಿದ್ದರು. ನಂತರ ರಕ್ಷಣಾ ಆಯುಧಗಳಲ್ಲಾದ ಬದಲಾವಣೆಯಿಂದ ಫಿರಂಗಿ, ಬಂದೂಕುಗಳನ್ನು ಈ ಕಿಂಡಿಗಳ ಮೂಲಕ ಉಪಯೋಗಿಸುತ್ತಿದ್ದರು.

ಸಾಳ್ವನು ಯುದ್ಧ ಪರ್ವದಲ್ಲಿ ಅಂಬುಗಂಡಿಯ ಬಗ್ಗೆ ಉಲ್ಲೇಖ ಮಾಡಿದ್ದಾನೆ.

> ಅಂಬುಗೂಡಾಗಿರ್ದ ರಥಕ । ದಂಬವಾರಥದೊಳಗೆ ಪಳಯಿಗೆ ।
> ದಂಬವನು ನೆಮ್ಮಿರ್ದರಾಟವು ತಿರ್ವಬೊಂಬೆಯನೆ ॥
> ಅಂಬುಕೊಳೆ ತಲೆವಾರಿ ಅಂತಕ । ದೊಂಬನಾಡಿಪ ಹಲಗೆ ಸೂತ್ರದ ।
> ಬೊಂಬೆಗಳ ವೊಲು ಕುಣಿದು ಕೆಡೆದುವು ತೇರೊಳಟ್ಟಿಗಳು ॥[೫೬]

ನಿಡುಗಲ್ಲು, ದೇವರಬೆಟ್ಟ, ಕನ್ನಮೇಡಿ, ಹೊಸಕೋಟೆಗಳಲ್ಲಿ ಅಂಬುಗಂಡಿಗಳನ್ನು ಕಾಣಬಹುದಾಗಿದೆ. ಈ ಕೋಟೆಗಳಲ್ಲಿರುವ ಕಿಂಡಿಗಳಲ್ಲಿ ಒಬ್ಬ ವ್ಯಕ್ತಿ ಏಕಕಾಲದಲ್ಲಿ ಎರಡು ಕಡೆ ವೀಕ್ಷಿಸಬಹುದಿತ್ತು.

**೩.೫.೬. ಬುರುಜು (ಕೊತ್ತಲ)**

ಕೋಟೆಯ ಗೋಡೆಗೆ ಹೊಂದಿಕೊಂಡಂತೆ ಕೊತ್ತಲಗಳನ್ನು ನಿರ್ಮಿಸಲಾಗುತ್ತದೆ.

ಕೊತ್ತಲಗಳನ್ನು ನಿರ್ಮಿಸುವ ಉದ್ದೇಶವೇನೆಂದರೆ ಕೋಟೆಯ ಗೋಡೆಗೆ ವಿಶಾಲವಾದ ಜಾಗವನ್ನು ಒದಗಿಸಲು ಕೋಟೆಯ ಕಾಳಗದ ಸಮಯದಲ್ಲಿ ಸೈನಿಕರು ಇಲ್ಲಿ ನಿಂತು ಕಾದಾಡಲು, ಕೊತ್ತಲದ ಮೇಲೆ ಫಿರಂಗಿಯನ್ನು ಇಟ್ಟು ಶತ್ರುಗಳ ಮೇಲೆ ಪ್ರಯೋಗಿಸಲು, ಶತ್ರುಗಳ ಚಲನವಲನ ವೀಕ್ಷಿಸಲು ಇವು ಕೋಟೆಯ ಗೋಡೆಗಿಂತ ಎತ್ತರವಾಗಿರುವುದರಿಂದ ರಕ್ಷಣಾ ಗೋಪುರಗಳನ್ನಾಗಿ ಉಪಯೋಗಿಸಬಹುದಿತ್ತು. ಕೆಲವೊಮ್ಮೆ ಕೊತ್ತಲು ಕೋಟೆಗೆ ಬಿಗಿಯಾದ ದ್ವಾರಬಾಗಿಲುಗಳಾಗಿ ರಕ್ಷಣೆ ನೀಡುತ್ತಿದ್ದವು.

ಕೊತ್ತಲುಗಳ ಬಗ್ಗೆ ಪಂಪನು ಆದಿಪುರಾಣದಲ್ಲಿ ಉಲ್ಲೇಖಮಾಡಿದ್ದಾನೆ.

ಆಕಾಶಾಂತಮನೆಯ್ದೆ ನೀಳ ವಿಕಟಾಟ್ಟಾಲಂಗಳೊಳ್ ಕೇತನಾ
ನೀಕಂಗಳ್ ರವಿರಶ್ಮಿಗಳ್ ಪುಗಲೆವೇಡೀ ರಶ್ಮಿಗಳ್ ಸಾಲ್ಗುಮಿಂ
ತೇಕಜ್ಜಂ ಬೆಳೆಗೆಂಬವೋಲ್ ತರುಗಿ ತಳ್ತಿಂಒಪ್ಪಿನಂ ಕಾಂಚನ
ಪ್ರಾಕಾರಂ ನಿಲೆ ತಾಳ್ದುಗುಂ ಕೃತಯುಗ ಪ್ರಾಕಾರದಾಕಾರಮಂ ॥
ಶಾಳಿ ಹರಿನೀಲ ಮಣಿಕಿರ
ಣಾಳಿ ಪೊದಳ್ದೆಸೆಯೆ ರಾಹುಗೆತ್ತಗೆದಿರ್ದ
ಟ್ಟಾಳಿಕೆಗಳಲ್ಲಿ ನಾಡೆಯು
ಮಾಳೋಚಂಬೆರೆಸು ತಡೆದು ನಡೆವಂದಿನಪಂ॥[೫೭]

ಹೀಗೆ ಕೋಟೆಯ ರಕ್ಷಣೆಗಾಗಿ ಈ ವಿಧಾನಗಳಂತೆ ಕೊತ್ತಲಗಳು ನಿಡುಗಲ್ಲು, ದೇವರಬೆಟ್ಟ, ಯಲ್ಲಪ್ಪನಾಯಕನ ಬೆಟ್ಟ, ಬಂಗಾರನಾಯಕನ ಬೆಟ್ಟ, ಕನ್ನಮೇಡಿಗಳಲ್ಲಿ ನಿರ್ಮಾಣವಾಗಿರುವುದನ್ನು ಕಾಣಬಹುದಾಗಿದೆ. ಕನ್ನಮೇಡಿ ಕೋಟೆಯಲ್ಲಿ ವೃತ್ತಾಕಾರದ ಕೊತ್ತಲಗಳೇ ಹೆಚ್ಚಾಗಿವೆ. ಉಳಿದ ಕೋಟೆಗಳಲ್ಲಿ ಚೌಕಾಕಾರದ, ವೃತ್ತಾಕಾರದ ಕೊತ್ತಲುಗಳನ್ನು ನೋಡಬಹುದಾಗಿದೆ.

### ೩.೫.೭. ಕೋಟೆಯ ಬಾಗಿಲುಗಳು

ಕೌಟಿಲ್ಯನು ಅರ್ಥಶಾಸ್ತ್ರದಲ್ಲಿ ಬಾಗಿಲನ್ನಿಡುವ ಸ್ಥಳದ ಪ್ರಾಕಾರದ ಗೋಡೆಯ ಎರಡೂ ಕಡೆಗಳಲ್ಲಿ ಒಂದೂವರೆ ದಂಡದ ಅಗಲದಲ್ಲಿ ಮಂಟಪವನ್ನು ಕಟ್ಟಿಸಬೇಕು. ಆ ಮಂಟಪದ ಒಳಗಡೆ ಮಹಾದ್ವಾರವನ್ನೂ ರಚಿಸಬೇಕು. ಮಹಾದ್ವಾರವು ಬೀದಿಯ ಅಗಲದಲ್ಲಿ ಆರನೆಯ ಒಂದು ಭಾಗದಷ್ಟು ಅಗಲವಾಗಿರಬೇಕು. ಮಹಾದ್ವಾರದ ನಾಲ್ಕು ಚೌಕಟ್ಟುಗಳು ಐದು ದಂಡಗಳಿಂದ ಹಿಡಿದು ಒಂದಕ್ಕಿಂತ ಮತ್ತೊಂದು ದಂಡ ವಿಸ್ತಾರದಿಂದ ಎಂಟು ದಂಡಗಳವರೆಗೆ ಚಚ್ಚೌಕವಾಗಿರಬೇಕು ಎಂದು ಹೇಳಿದ್ದಾನೆ.[೫೮]

ಕೋಟೆಯ ಬಾಗಿಲುಗಳನ್ನು ಸಹಜವಾಗಿ ಕೋಟೆಯ ಗಾತ್ರಕ್ಕೆ ಅನುಗುಣವಾಗಿ ಇಡಲಾಗುತ್ತದೆ. ದ್ವಾರಗಳಿಗೆ ಅತ್ಯಂತ ಗಟ್ಟಿಮುಟ್ಟಾದ ಮರದ ಬಾಗಿಲುಗಳಿಂದ ಭದ್ರಗೊಳಿಸುತ್ತಿದ್ದರು. ಈ ದ್ವಾರಗಳ ಬಳಿ ಯಾವಾಗಲು ಕಾವಲು ಪಡೆಯಿರುತ್ತಿತ್ತು. ಇವರ ಮೇಲೆಯೇ ಕೋಟೆಯ ಅಳಿವು ಉಳಿವು ಇರುತ್ತಿತ್ತು. ದ್ವಾರದ ಎರಡೂ ಕಡೆ ತೆರೆದ ಮಂಟಪವಿರಬೇಕು ಕೋಟೆಯ ಬಾಗಿಲನ್ನು ಹಾಕಿದಾಗ ದಿಡ್ಡಿ ಬಾಗಿಲನ್ನು ಕೋಟೆಯ ಒಳಗಿರುವ ಜನರು ಬಳಸಬಹುದಿತ್ತು. ಅದೂ ಅವರನ್ನು ಭಿಗಿ ಭದ್ರತೆಯಿಂದ ಈ ದಿಡ್ಡಿ ಬಾಗಿಲನ್ನು ಬಳಸಲು ಅವಕಾಶ ಮಾಡಿಕೊಡಲಾಗುತ್ತಿತ್ತು.

ನಿಡುಗಲ್ಲಿನಲ್ಲೂ ಸಹ ಇದೇ ರೀತಿಯ ಕೋಟೆಯ ಬಾಗಿಲುಗಳಿರುವುದನ್ನು ಕಾಣಬಹುದು. ನಿಡುಗಲ್ಲು ಕೋಟೆಯ ಪೂರ್ವಕ್ಕಿರುವ ಪಾಗೊಂಡೆ ಬಾಗಿಲು ರಕ್ಷಣೆಯ ದೃಷ್ಟಿಯಿಂದ ವಾಸ್ತುಬದ್ಧವಾಗಿದೆ. ಈ ಮಹಾದ್ವಾರದ ರಚನೆ ಚಿತ್ರದುರ್ಗದ ಕೋಟೆ ಮತ್ತು ಗುಮ್ಮನಾಯಕನಹಳ್ಳಿ ಕೋಟೆಯ ಮಹಾದ್ವಾರದ ರೀತಿಯಲ್ಲೆ ಇದ್ದು,[೫೯] ಹೊರಗಿನಿಂದ ದಾಳಿ ಮಾಡುವವರಿಗೆ ಸುಲಭವಾಗಿ ನುಗ್ಗಲು ಆಗದಂತೆ ಅನಿರೀಕ್ಷಿತ ತಿರುವುಗಳಿಂದ ಕೂಡಿದೆ. ಪ್ರವೇಶ ದ್ವಾರಗಳನ್ನು ಗಾರೆಯಿಂದ ನಯಮಾಡಿ ಅದರ ಮೇಲೆ ಯಾಳಿ, ಹಂಸ, ಬಳ್ಳಿ, ಹೂ, ಸಿಂಹ, ಆನೆ, ಕೂರ್ಮ, ವೃಶ್ಚಿಕ, ಲಜ್ಜಾಗೌರಿ, ಸೈನಿಕರು, ಹುಲಿ ಮೊದಲಾದ ಉಬ್ಬುಶಿಲ್ಪಗಳನ್ನು ಚಿತ್ರಿಸಲಾಗಿದೆ. ಗೋಡೆಗಳ ಮೇಲಿನ ಭಾಗದಲ್ಲಿ ನೀರು ಕೆಳಮುಖವಾಗಿ ಹರಿದು ಗೋಡೆಯು ಹಾಳಾಗದಂತೆ ತಡೆಯಲು ಗಾರೆಯಿಂದ ಇಳಿಜಾರು ಮಾಡಲಾಗಿದೆ. ವಜ್ರದ ಊರಬಾಗಿಲನ್ನು ಶತ್ರುಗಳಿಗೆ ವಶವಾಗದಂತೆ ರಕ್ಷಣಾಬದ್ದವಾಗಿ ನಿರ್ಮಿಸಿದ್ದಾರೆ. ಇದೇ ವಿಧಾನವನ್ನು ದೇವರ ಬೆಟ್ಟ, ಕನ್ನಮೇಡಿ, ಹೊಸ ಕೋಟೆ, ಬಂಗಾರನಾಯಕನ ಬೆಟ್ಟದಲ್ಲಿ ಕಾಣಬಹುದಾಗಿದೆ.

### ೩.೫.೮. ಮುಗಿಲಟ್ಟಣೆ (ಅಟ್ಟಾಲಕ)

ಕೌಟಿಲ್ಯನು ಅರ್ಥಶಾಸ್ತ್ರದಲ್ಲಿ ಕೋಟೆಯ ಮೇಲೆ ಚಚ್ಚೌಕವಾಗಿ 'ಅಟ್ಟಾಲಕ'ವನ್ನೂ ಅದರ ಎತ್ತರಕ್ಕನುಸಾರವಾಗಿ ಸೋಪಾನವನ್ನು ಮೂವತ್ತು ದಂಡದಷ್ಟು ಅಂತರವಿರುವಂತೆ ನಿರ್ಮಿಸಬೇಕು. ಎರಡು ಅಟ್ಟಾಲಕಗಳ ಮಧ್ಯದಲ್ಲಿ ಎರಡು ಅಂತಸ್ತಿನ ಇಟ್ಟಿಗೆಯ ಮನೆಯನ್ನು ಅಗಲದ ಎರಡೂವರೆಯಷ್ಟು ಉದ್ದವಿರುವ 'ಪ್ರತೋಲಿ' ಎಂಬ ಮನೆಯನ್ನು ಮಾಡಿಸಬೇಕು. ಇವುಗಳ ನಡುವೆ ಮೂರು ಜನ ಬಿಲ್ಲುಗಾರರು ನೆಲೆಸಲು ಯೋಗ್ಯವೂ, ರಂಧ್ರಯುಕ್ತವಾದ ಹಲಗೆಯಿಂದ ಕೂಡಿದುದೂ, ಮೇಲ್ಚಾವಣಿಯುಕ್ತವೂ ಎನಿಸಿದ 'ಇಂದ್ರಕೋಶ'ವೆಂಬ ರಕ್ಷಣಾಗೃಹವನ್ನು ಮಾಡಿಸಬೇಕು ಎಂದು ಹೇಳಿದ್ದಾರೆ.[೬೦]

ಸಾಮಾನ್ಯವಾಗಿ ಮುಗಿಲಟ್ಟಣೆಯನ್ನು ಸೈನಿಕರು ಓಡಾಡಲು, ಕೋಟೆ ಕಾಳಗದ ಸಮಯದಲ್ಲಿ ಯುದ್ಧೋಪರಣಗಳನ್ನು ಇಡಲು ಬಳಸುತ್ತಾರೆ. ಇದನ್ನು ಗಾರೆಯಿಂದ ನಯ ಮಾಡಲಾಗಿರುತ್ತದೆ.

ಕೆಲವೊಮ್ಮೆ ಕೋಟೆ ಕಾಳಗದ ಸಮಯದಲ್ಲಿ ಮುರಿದು ಹೋಗುವ ಸಂಭವವಿರುತ್ತದೆ. ಮುಗಿಲಟ್ಟಣೆಯನ್ನು ನಿಡುಗಲ್ಲು ಕೋಟೆಯಲ್ಲಿ ಮಾತ್ರ ಕಾಣಬಹುದಾಗಿದೆ.

ಹೀಗೆ ಕೋಟೆಯಲ್ಲಿ ಹಲವು ವಿಧದ ಅಂಗಭಾಗಗಳಿರುವುದನ್ನು ಕಾಣಬಹುದಾಗಿದೆ. ಇವುಗಳ ಜೊತೆಗೆ, ಸುರಂಗಮಾರ್ಗ, ಗುಪ್ತಮಾರ್ಗ, ಗುಹೆಗಳು ಮೊದಲಾದವುಗಳು ನಿಡುಗಲ್ಲಿನಲ್ಲಿ ಇರುವುದನ್ನು ಕಾಣಬಹುದಾಗಿದೆ.

### ೩.೬. ಕೋಟೆಗಳ ವಿನ್ಯಾಸ

ಸಾಮಾನ್ಯವಾಗಿ ಕೋಟೆಗಳನ್ನು ರಕ್ಷಣೆಯ ದೃಷ್ಟಿಯಿಂದ ವಾಸ್ತುಬದ್ಧವಾಗಿ ನಿರ್ಮಿಸಲಾಗಿರುತ್ತದೆ. ಕೌಟಿಲ್ಯನು ಅರ್ಥಶಾಸ್ತ್ರದಲ್ಲಿ ಕೋಟೆಯೊಳಗಡೆಯಲ್ಲಿ ಪೂರ್ವ–ಪಶ್ಚಿಮವಾಗಿ ಮೂರು ಉದ್ದವಾದ ಮಾರ್ಗಗಳೂ ದಕ್ಷಿಣೋತ್ತರವಾಗಿ ಮೂರು ಉದ್ದವಾದ ರಾಜಮಾರ್ಗಗಳೂ ಇರಬೇಕು. ಪ್ರತಿದಿಕ್ಕಿಗೂ ಮೂರು ಮೂರು ಬಾಗಿಲುಗಳಂತೆ ಒಟ್ಟು ಹನ್ನೆರಡು ದ್ವಾರಗಳಿಂದ ಕೂಡಿರಬೇಕು. ಮೇಲಾಗಿ ನೀರು, ಭೂಮಾರ್ಗ ಮತ್ತು ಜಲಮಾರ್ಗಗಳಿಂದಲೂ, ಗುಪ್ತವಾದ ಸುರಂಗಮಾರ್ಗಗಳಿಂದಲೂ ಕೂಡಿರಬೇಕು.[೮] ಬಹುತೇಕ ಕೋಟೆಗಳು ಆಯತಾಕಾರ ಮತ್ತು ವೃತ್ತಾಕಾರ ತಳವಿನ್ಯಾಸವನ್ನು ಹೊಂದಿರುತ್ತವೆ. ಅದೇ ರೀತಿ ನಿಡುಗಲ್ಲು ಪರಿಸರದಲ್ಲಿ ಬರುವ ಕೋಟೆಗಳ ತಳವಿನ್ಯಾಸ ಈ ರೀತಿಯಿದೆ.

೧. ನಿಡುಗಲ್ಲು – ಆಯತಾಕಾರ

೨. ದೇವರ ಬೆಟ್ಟ – ಆಯತಾಕಾರ

೩. ಯಲ್ಲಪ್ಪನಾಯಕನ ಕೋಟೆ – ಅರ್ಧವೃತ್ತಾಕಾರ

೪. ಬಂಗಾರ ನಾಯಕನ ಬೆಟ್ಟ – ವೃತ್ತಾಕಾರ

೫. ಕನ್ನಮೇಡಿ – ಅರ್ಧವೃತ್ತಾಕಾರ

### ೩.೭. ಕೋಟೆಯ ರಚನಾಕ್ರಮ

ಪ್ರಾರಂಭದಲ್ಲಿ ನಿಡುಗಲ್ಲು ಕೋಟೆಯನ್ನು ದಪ್ಪದಾದ ಒರಟು ಕಲ್ಲಿನಿಂದ ನಿರ್ಮಿಸಿದ್ದು, ನಂತರದ ಕಾಲದಲ್ಲಿ ಅದಕ್ಕೆ ನುಣುಪುಮಾಡಿದ ಕಲ್ಲು ಮತ್ತು ಗಾರೆಯ್ನನು ಬಳಸಿ ನಿರ್ಮಾಣವನ್ನು ಪೂರ್ಣಗೊಳಿಸಿದ್ದಾರೆ. ವಜ್ರದ ಊರಬಾಗಿಲಿಗೆ ಹೆಚ್ಚಿನ ಪ್ರಮಾಣದಲ್ಲಿ ಗಾರೆಯನ್ನು ಬಳಸಿ ಕಟ್ಟಿರುವುದನ್ನು ನೋಡಿದಾಗ ಕಾಲಕಾಲಕ್ಕೆ ಕೋಟೆಯು ಬೆಳವಣಿಗೆ ಹೊಂದಿರುವುದನ್ನು ಗಮನಿಸಬಹುದಾಗಿದೆ. ಕೋಟೆಯನ್ನು ರಕ್ಷಣಾ ದೃಷ್ಟಿಯಿಂದ ಬೀಗಿಗೊಳಿಸಲು ಕೊತ್ತಲ, ಗೋಪುರ, ದ್ವಾರಗಳು, ಸುರಂಗಮಾರ್ಗ, ಗುಪ್ತಮಾರ್ಗ, ಫಿರಂಗಿಗಳು ಮೊದಲಾದವನ್ನು ನಿರ್ಮಿಸಿದರು. ದೇವರ ಬೆಟ್ಟ ಮತ್ತು ಬಂಗಾರ ನಾಯಕನ ಬೆಟ್ಟದ ಕೋಟೆಗಳು ಚಿಕ್ಕ ಚಿಕ್ಕ ಕಲ್ಲು ಮತ್ತು

ಮಣ್ಣಿನಿಂದ ಕೋಟೆಯ ಗೋಡೆಗಳನ್ನು ಕಟ್ಟಿದ್ದಾರೆ. ಉಳಿದ ಯಲ್ಲಪ್ಪನಾಯಕನ ಕೋಟೆ ಮತ್ತು ಕ್ಯನಮೇಡಿ ಕೋಟೆಗಳನ್ನು ನಿಡುಗಲ್ಲು ಕೋಟೆಯ ರೀತಿಯಲ್ಲಿ ನಿರ್ಮಿಸಿದ್ದಾರೆ.

### ೩.೮. ನಿವೇಶನದ ಆಯ್ಕೆ

ರಾಜನು ತನ್ನ ಮತ್ತು ತನ್ನ ರಾಜ್ಯವನ್ನು ರಕ್ಷಿಸಲೆಂದು ಯೋಗ್ಯವಾದ ಸ್ಥಳದಲ್ಲಿ ವಾಸ್ತು ಬದ್ಧವಾಗಿ ಕೋಟೆಯನ್ನು ಕಟ್ಟುತ್ತಾನೆ.

ಕೌಟಿಲ್ಯನು ತ್ನನ ಅರ್ಥಶಾಸ್ತ್ರದಲ್ಲಿ "ಅನೇಕ ಗಿಡ ಮರಗಳ ಪೊದರುಗಳಿಂದ ಕೂಡಿದ ದನಕರುಗಳು, ಹಕ್ಕಿಗಳು, ಇತರೆ ಪ್ರಾಣಿಗಳಿಂದ ಸಮೃದ್ಧವಾಗಿರುವ, ಜಲಸಂಪತ್ತು, ಕೃಷಿಗೆಯೋಗ್ಯವಾದ ಭೂಮಿಯಿಂದ ಆವೃತವಾಗಿರುವ ಪ್ರದೇಶ'ದ್ಲಲಿ ಕೋಟೆಗಳನ್ನು ಕಟ್ಟಬೇಕು"[೨] ಎಂದು ಹೇಳಿದ್ದಾನೆ.

ಕೋಟೆಗಳನ್ನು ಕಟ್ಟಿದ ನಂತರ ಕೋಟೆಯನ್ನು ರಕ್ಷಿಸಲೆಂದು ದೇವಾಲಯಗಳನ್ನು ನಿರ್ಮಿಸುತ್ತಾರೆ. ನಿಡುಗಲ್ಲಿನಲ್ಲೂ ಸಹ ಸಪ್ತಮಾತೃಕೆಯರು, ಕಾಳಿಭೈರವಿ, ಭೈರವ, ಗಣಪತಿ, ಆಂಜನೇಯ ವಿಗ್ರಹಗಳನ್ನು ಪ್ರತಿದಿಕ್ಕಿಗೂ ಪ್ರತಿಷ್ಠಾಪಿಸಿದ್ದು ಇವರೆ ಕೋಟೆಗಳನ್ನು ರಕ್ಷಿಸುತ್ತಾರೆ ಎಂಬ ನಂಬಿಕೆ ರೂಢಿಯಲ್ಲಿತ್ತು.

ಕೆಲವೊಮ್ಮೆ ಕೋಟೆಯನ್ನು ನಿರ್ಮಿಸಲು ಮಣ್ಣಿನ ಗುಣವನ್ನು ಸಹ ಪರಿಗಣಿಸುವರು ಉದಾ: ಯಲ್ಲಪ್ಪನಾಯಕನು ಒಮ್ಮೆ ಕುಂದುರ್ಪಿಯಿಂದ ಯಲ್ಲಪ್ಪನಾಯಕನ ಹಳ್ಳಿಗೆ ಬೇಟೆಯಾಡಲು ಬಂದಾಗ ಮೊಲವೊಂದು ತೋಳವನ್ನು ಅಟ್ಟಿಸಿಕೊಂಡು ಹೋಗುತ್ತಿರುವುದನ್ನು ನೋಡಿ ಇದು ಗಂಡುಮೆಟ್ಟಿದನೆಲೆ ಎಂದು ಪರಿಗಣಿಸಿ ಬೆಟ್ಟದ ಮೇಲೆ ಕೋಟೆ ಕಟ್ಟಿದ ಎಂಬ ಐತಿಹ್ಯವಿದೆ.[೩]

ನಿಡುಗಲ್ಲು ಬೆಟ್ಟವು ಮೂರು ಹಂತಗಳಲ್ಲಿದ್ದು, ಸುಮಾರು ೩ಕಿ.ಮೀಟರ್‌ಗಳವರೆಗೆ ವಿಶಾಲ ಜಾಗವು ಕೋಟೆಯ ಒಳಗೆ ಇರುವುದರಿಂದ ಕೃಷಿಗೆ ಯಾವುದೇ ತೊಂದರೆಯಿರದೆ ಆಹಾರ ಪದಾರ್ಥಗಳ ಸಮಸ್ಯೆ ಏರ್ಪಡುತ್ತಿರಲಿಲ್ಲ. ಈ ಕಾರಣದಿಂದಲೇ ಮೊಗಲರ ಅಧಿಕಾರಿಗಳು ನಿಡುಗಲ್ಲಿನ ಮೇಲೆ ಮುತ್ತಿಗೆ ಹಾಕಿದಾಗ ಮೂರು ವರ್ಷಗಳವರೆಗೆ ಶರಣಾಗಲಿಲ್ಲ.[೪] ಕೋಟೆಯ ನಿರ್ಮಾಣಕ್ಕೆ ಸ್ಥಳೀಯವಾಗಿ ಸಿಗುವ ಗ್ರಾನೈಟ್‌ಕಲ್ಲು ಮತ್ತು ಮಣ್ಣಿನಿಂದ ನಿರ್ಮಾಣಮಾಡಿದ್ದಾರೆ. ನಂತರದ ಕಾಲದಲ್ಲಿ ಗಾರೆ ಮತ್ತು ಇಟ್ಟಿಗೆಯನ್ನು ಕೋಟೆಗೆ ಬಳಸಿದ್ದಾರೆ.

### ೩.೯. ಕೋಟೆಯಲ್ಲಿನ ಇತರ ಕಟ್ಟಡಗಳು ಮತ್ತು ವಾಸ್ತು

ಕೌಟಿಲ್ಯನು ಅರ್ಥಶಾಸ್ತ್ರದಲ್ಲಿ ನಾಲ್ಕು ವರ್ಣದ ಜನರು ವಾಸಿಸಲು ಯೋಗ್ಯ ಗುಣಸಂಪನ್ನವೂ ವೀರ್ಯವತ್ತೂ ಆದ ವಾಸ್ತು ಪ್ರದೇಶದಲ್ಲಿ ರಾಜಭವನವನ್ನು ನಿರ್ಮಿಸಬೇಕು.

ಅಂತಃಪುರವನ್ನು ಪೂರ್ವಭಿಮುಖವಾಗಿಯಾಗಲೀ, ಉತ್ತರಾಭಿಮುಖವಾಗಿಯಾಗಲೀ ಕಟ್ಟಬೇಕು. ಅದರ ಈಶಾನ್ಯ ಭಾಗದಲ್ಲಿ ಪುರೋಹಿತರ ಯಜ್ಞ ಭೂಮಿಯನ್ನೂ, ಮಂತ್ರಿಗಳ ವಸತಿ, ಸಭಾಗೃಹ, ನೀರಿನ ಸ್ಥಾನವಿರಬೇಕು. ಉಗ್ರಾಣ, ಅಂತರ್ಗೃಹ ಅದರ ಆಗ್ನೇಯ ಭಾಗದಲ್ಲಿರಬೇಕು. ಶಿಲ್ಪಿಗಳು, ಕ್ಷತ್ರಿಯರು, ಪೂರ್ವ ದಿಕ್ಕಿಗಿರಬೇಕು. ನೈರುತ್ಯದಲ್ಲಿ ಕುಪ್ಯಗೃಹ, ಆಯುಧ ಶಾಲೆಗಳೂ, ದಕ್ಷಿಣ ದಿಕ್ಕಿಗೆ ನಗರ ವ್ಯವಹಾರಿಗಳು, ಧಾನ್ಯ ವ್ಯವಹಾರಿಗಳಿರಬೇಕು ಎಂದು ಹೇಳಿದ್ದಾನೆ.[೨] ಅದೇ ರೀತಿ ನಿಡುಗಲ್ಲಿನಲ್ಲೂ ವಿಶಾಲವಾದ ಅರಮನೆ ಬಯಲಿದೆ. ಈ ಬಯಲಿನಲ್ಲಿ ಈಜುಕೊಳ, ದೇವಾಲಯ, ಧಾನ್ಯಸಂಗ್ರಹಣ ಕಣಜ, ವಸತಿಗಳು, ತುಪ್ಪದ ಕಣಜ, ಗುಪ್ತಮಾರ್ಗ, ಗೋಪುರ ಮೊದಲಾದವು ಇಟ್ಟಿಗೆ ಮಣ್ಣು ಮತ್ತು ಗಾರೆಯಿಂದ ನಿರ್ಮಾಣವಾಗಿದೆ. ಅರಮನೆಯಲ್ಲಿ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಾಣವಾದ ಗೋಳಾಕೃತಿಯ ಕಟ್ಟಡವಿದ್ದು ಸ್ಥಳೀಯರು ಇದನ್ನು ಮಾರಮ್ಮ ದೇವಾಲಯ ಎನ್ನುತ್ತಾರೆ. ಕೆಲವು ಕಟ್ಟಡಗಳ ಬಾಗಿಲು ಕಮಾನಿನಾಕೃತಿಯಲ್ಲಿ ನಿರ್ಮಾಣಗೊಂಡಿವೆ. ಇವುಗಳ ಜೊತೆಗೆ ಸುಮಾರು ೧೯ ದೇವಾಲಯಗಳು ಸ್ಥಳೀಯರು ೧೨,೦೦೦ ಮನೆಗಳು ಇದ್ದವು ಎಂಬುದರ ಅವಶೇಷಗಳು ದೊರಕುತ್ತಿವೆ.

ಇದೇ ರೀತಿ ದೇವರ ಬೆಟ್ಟ, ಯಲ್ಲಪ್ಪನಾಯಕನ ಬೆಟ್ಟ, ಬಂಗಾರನಾಯಕನ ಬೆಟ್ಟ, ಕನ್ನಮೇಡಿ ಕೋಟೆಗಳಲ್ಲಿ ಅರಮನೆ, ದೇವಾಲಯ, ವಸತಿಗಳು, ತುಪ್ಪದಕಣಜ, ನೀರಿನ ಚಿಲುಮೆಗಳ ಅವಶೇಷಗಳಿರುವುದನ್ನು ನೋಡಬಹುದಾಗಿದೆ.

### ೩.೧೦. ಸಾಹಿತ್ಯದಲ್ಲಿ ಕೋಟೆಗಳ ವರ್ಣನೆ.

ರಾಜನ ಹಿತಾಸಕ್ತಿಯ ರಕ್ಷಣೆಗಾಗಿಯೇ ನಿರ್ಮಾಣವಾದ ಕೋಟೆಗಳ ಬಗ್ಗೆ ಶಾಸನಗಳಲ್ಲಿ ಹೆಚ್ಚಿನ ಮಾಹಿತಿ ದೊರೆಯದಿದ್ದರೂ ಸಾಹಿತ್ಯಕೃತಿಗಳಾದ ಮಾನಸಾರ, ಮಯಾಮತ, ವಿಶ್ವಕರ್ಮ ವಾಸ್ತು, ಮತ್ಸ್ಯಪುರಾಣ, ರಾಜನೀತಿಸಾರ, ವಿಷ್ಣುಪುರಾಣ, ಕೌಟಿಲ್ಯನ 'ಅರ್ಥಶಾಸ್ತ್ರ' ಮನಸ್ಮೃತಿ, ಕಾಮಂದಕನ 'ನೀತಿಸಾರ' ಮೊದಲಾದವು ವಿಪುಲ ಮಾಹಿತಿಯನ್ನು ಒದಗಿಸುತ್ತವೆ.

ಕೌಟಿಲ್ಯನು ಅರ್ಥಶಾಸ್ತ್ರದಲ್ಲಿ ಕೋಟೆಯ ಬಗ್ಗೆ ಈ ರೀತಿ ಹೇಳಿದ್ದಾನೆ. "ತಮ್ಮ ರಾಜ್ಯದ ಸರಹದ್ದಿನ ನಾಲ್ಕು ದಿಶೆಗಳಲ್ಲಿರುವ ನೈಸರ್ಗಿಕ ಭೂರಚನೆಯ ಲಾಭಪಡೆದು ಯುದ್ಧೋಪಯೋಗಿ ಯಾಗುವಂಥ ದುರ್ಗಗಳನ್ನು ಕಟ್ಟಬೇಕು. ಕೋಟೆಕೊತ್ತಲಗಳ ಸುತ್ತ ದೊಡ್ಡ ದೊಡ್ಡ ಕಂದಕಗಳು ಇರುವುದು ಸಂರಕ್ಷಣೆಯ ದೃಷ್ಟಿಯಿಂದ ಬಹಳ ಉಪಯುಕ್ತ" ಎಂದು ಹೇಳಿದ್ದಾರೆ.[೬೬]

ತಿರುವಳ್ಳುವರ್‌ನು 'ತಿರುಕ್ಕುಱಳ್' ಎಂಬ ಗ್ರಂಥದಲ್ಲಿ ಕೋಟೆಯ ಬಗ್ಗೆ ಉಲ್ಲೇಖ ಮಾಡಿದ್ದಾನೆ.

ಆಱುಬವರ್ಕ್ಕುಮ್ ಅರಣ್ಪೊರುಳ್ ಅಂಜಿತ್ತಱ್
ಪೋಱ್ಱು ಬವರ್ಕ್ಕುಮ್ ಪೊರುಳ್.
ಮಣಿನೀರುಮ್ ಮಣ್ಣುಮ್, ಮಲೈಯುಮ್ ಅಣಿನಿಱಲ್
ಕಾಡುಮ್ ಉಡೈಯದು ಅರಣ್.
ಉಯರ್ವಗಲಮ್ ತಿಣ್ಮೈ ಅರುಮೈ ಇನ್ನಾನ್ಗಿನ್
ಅಮೈವರಣ್ ಎನ್ರುಱೈಕ್ಕುಮ್ ನೂಲ್.
ಶಿಱುಗಾಪ್ಪಿಱ್ ಪೇರಿಡತ್ತದಾಗಿ ಉಱುಪಗೈ
ಊಕ್ಕಮ್ ಅಟಿಪ್ಪದು ಅರಣ್.
ಕೊಳ ಱ್ಕರಿದಾಯ್ ಕ್ಕೊಣ್ಡಕೊಟ್ತ್ತಾಗಿ ಅಗತ್ತಾರ್
ನಿಲೈಕ್ಕೆಳಿದಾಮ್ ನೀರದು ಅರಣ್.
ಎಲ್ಲಾ ಪ್ಪೊರುಳುಮ್ ಉಡೈತ್ತಾಯ್ ಇಡತ್ತುದವುಮ್
ನಲ್ಲಾಳ್ ಉಡೈಯದು ಅರಣ್.
ಮುಱ್ಱಿಯುಮ್ ಮುಱ್ಱಾದೆಱಿನ್ದುಮ್ ಅಱೈಪ್ಪಡುತ್ತುಮ್
ಪಱ್ಱಿ ಱ್ಕರಿಯದು ಅರಣ್.
ಮುಱ್ಱಾ ಱ್ಱಿ ಮುಱ್ಱಿ ಯವರೈಯುಮ್ ಪಱ್ಱಱ್ಱ.
ಪ್ಪಱ್ಱಿಯಾರ್ ವೆಲ್ವದು ಅರಣ್.
ಮುನೈಮುಗತ್ತು ಮಾಱ್ಱಲರ್ ಶಾಯ ವಿನೈ ಮುಗತ್ತು
ವೀಱೆಯ್ದಿ ಮಾಣ್ಡದು ಅರಣ್.
ಎನೈ ಮಾಪ್ಪಿತ್ತಾಗಿಯ ಕ್ಕಣ್ಣುಮ್ ವಿನೈಮಾಟ್ಟಿ
ಇಲ್ಲಾರ್ಕಣ್ ಇಲ್ಲದು ಅರಣ್.

ಅಂದರೆ ಕೋಟೆ ಎಂದರೇನು, ಕೋಟೆ ಎಂಬುದು ಹೇಗಿರಬೇಕು. ರಕ್ಷಣೆಯ ದೃಷ್ಟಿಯಿಂದ ಕೋಟೆ ಎಷ್ಟು ಮಹತ್ವ ಎಂಬುದನ್ನು ಹೇಳುತ್ತವೆ. ಉದಾ: ಶತ್ರುವನ್ನು ಎದುರಿಸಿ ಹೋರಾಡುವವರಿಗೆ ಕೋಟೆಯೇ ಆಧಾರ; ಅದರಂತೆ, ಶತ್ರುಸೇನೆಗೆ ಅಂಜಿ, ತಮ್ಮ ರಕ್ಷಣೆ ಮಾಡಿಕೊಳ್ಳುವವರಿಗೂ ಅದೇ ಆಧಾರ, ಮಣಿಯಂತೆ ತಿಳಿಯಾದ ನೀರು, ಸಮತಟ್ಟಾದ ಭೂಮಿ, ಮಳೆ, ಸೊಗಸಾದ ನೆರಳುಳ್ಳ ಕಾಡು ಇವುಗಳನ್ನು ಉಳ್ಳದ್ದೇ ಕೋಟೆಯೆನಿಸಿಕೊಳ್ಳುವುದು. ಹೀಗೆ ಕೋಟೆಯ ಬಗ್ಗೆ ತಿರುವಳ್ಳುವರ್ ಹಲವು ವಿಧದಲ್ಲಿ ವರ್ಣಿಸಿದ್ದಾನೆ.[೬]

ದೇವಚಂದ್ರ ವಿರಚಿತನಪೂಜ್ಯಪಾದ ಚರಿತೆಯಲ್ಲಿ ತನ್ನ ಸ್ವಪ್ನದಲ್ಲಾದ ಕೋಟೆಯ ವರ್ಣನೆಯನ್ನು ಬರೆದಿದ್ದಾನೆ.

"ನವರತ್ನದೊಳೊಂದು ಮಾಣಿಕ್ಯದೊಳೊಂದು । ವಿವರಿಸಿ ಮಿಸುನಿಯೊಳೈದು

ಸುವಿನಯಗಗನಸ್ಪದಿದೊಳಗೆರಡಿಂತು । ನವಸುತ್ತು ಕೋಟೆಯಂದರಿದ

ದಿಕ್ಕುನಾಲ್ಕರೊಳು ಗೋಪುರದ್ವಾರಗಳೆಂದರೆ । ದಿಕ್ಕುನಾಲ್ಕರೊಳ್ ಮಾನಸ್ತಂಭಇಕ್ಕೆಲದೊಳು ದ್ವಾರದಿ ದ್ವಾರಪಾಲಕ । ರಿಕ್ಕಿಹ ಸುತ್ತ ಕೋಂಟೆಯೊಳು"

ಅಂದರೆ ಶ್ರೀಪಾದರಾಜರು ತಮ್ಮ ಅಂತರಂಗದಲ್ಲಿ ಒಂದು ಪ್ರದೇಶದ ಕಲ್ಪನೇನ್ನು ಮಾಡಿಕೊಂಡಿದ್ದರು. ಅದರಲ್ಲಿ ಒಂಬತ್ತು ಸುತ್ತು ಕೋಟೆಗಳಿಂದ ಆವೃತ್ತವಾಗಿತ್ತು. ಪ್ರತಿಯೊಂದು ಕೋಟೆಗೆ ನಾಲ್ಕು ದ್ವಾರಗಳು ನಾಲ್ಕು ಗೋಪುರಗಳಿವೆ. ಅವುಗಳೆದುರು ಒಂದು ಮಾನಸ ಸ್ತಂಭ ಹಾಗೂ ಕೋಟೆಯ ರಕ್ಷಣೆಗಾಗಿ ದ್ವಾರದ ಎರಡೂ ಕಡೆ ದ್ವಾರಪಾಲಕರು ಇದ್ದರೆಂದು ಹೇಳಿದ್ದಾರೆ.[೬೮]

ಗೋವಿಂದ ವೈದ್ಯನು ಕಂಠೀರವನರಸರಾಜ ವಿಜಯದಲ್ಲಿ ಕೋಟೆಗಳ ಬಗ್ಗೆ ಈ ರೀತಿವರ್ಣನೆ ಮಾಡಿದ್ದಾನೆ.

"ಅಟ್ಟದಿಗ್ದಳರು ತಮ್ಮಯ ಪಟ್ಟಣಗಳಿ
ಗಟ್ಟುಳಿಯಾಗೆ ರಕ್ಕಸರ
ನೆಟ್ಟನೆ ನಿಲುವ ತಾಣಗಳನೆ ಕೊತ್ತಳ
ಕಟ್ಟಿಸಕ ದೊಳೊಪ್ಪಿದುವು."[೬೯]

ಕರಿಬಸವರ್ಯ ವಿರಚಿತ 'ಶ್ರೀಕುಮಾರ ವಿಜಯವಿಳಾಸಂ'ನಲ್ಲಿ ಕೋಟೆಯ ಬಗ್ಗೆ ಉಲ್ಲೆಖವಾಗಿದೆ.

"ಕೋಟೆಗಳ ನೊರ್ಮೆ ಕೂಡಿಸಿ ಕೋಪದಿಂ ದೈತ್ಯ
ಕೋಟೆಗಳ ಮೇಲಿದಾಡುತೆ ಮಹಾದ್ಭುತ ಭೂತ
ಕೋಟೆಗಳ ಸಿಂಹ್ವನಾದಂಗೆಯ್ಯಲಾದ ನುಜವಹನಾರ್ದುಕೋಂದಂಡದಾ
ಕೋಟೆಗಳ ನೋಡಿ ಜೇವೊಡೆದು ರಿಪು ಶೈಲಶತ
ಕೋಟಿಯವನೆಲ್ಲಂ ನಿರೀಕ್ಷಿಸುತೆ ಧೈರ್ಯದಿಂ
ಕೋಟಿ ನಿಶಿತಾಂಬಕಗಳು ಚೂರ್ಣಮಾಗಯ್ದನಾಹವ ದೊಳೇನೆಂಬನೊ"[೭೦]

## ೩.೧೧. ಕೋಟೆಯ ಪ್ರಕಾರಗಳು

ಸಾಮಾನ್ಯವಾಗಿ ರಾಜನು ತನ್ನ ರಾಜ್ಯದ ರಕ್ಷಣೆಗಾಗಿ ತಮ್ಮ ವ್ಯಾಪ್ತಿಯಲ್ಲಿರುವ ಭೌಗೋಳೀಕ ಪ್ರದೇಶಕ್ಕನುಸಾರವಾಗಿ ಕೋಟೆಗಳನ್ನು ಕಟ್ಟಿಕೊಳ್ಳುತ್ತಾನೆ. ರಕ್ಷಣೆಯ ದೃಷ್ಟಿಯಿಂದ ಕೌಟಿಲ್ಯ,

ಮನು, ಶುಕ್ರ, ಕಾಮಂದಕ, ದುರ್ಗಸಿಂಹ ಮೊದಲಾದವರು ವಿವಿಧ ಪ್ರಕಾರದ ಕೋಟೆಗಳನ್ನು ಕಟ್ಟಿಕೊಳ್ಳಬೇಕೆಂದು ಉಲ್ಲೇಖ ಮಾಡಿದ್ದಾರೆ.

ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ರಾಜ್ಯದ ನಾಲ್ಕು ದಿಕ್ಕುಗಳಲ್ಲೂ ವೈರಿಪಡೆಯನ್ನು ತಡೆಯಲು ಸೂಕ್ತವಾದ ಕೋಟೆಗಳನ್ನು ಸ್ಥಳಗಳನ್ನಾಧರಿಸಿ ನಾಲ್ಕು ವಿಧದಲ್ಲಿ ಕಟ್ಟಬೇಕೆಂದು ಹೇಳಿದ್ದಾರೆ.

೧. ಔದಕ: ಇದರಲ್ಲಿ ಎರಡು ಪ್ರಕಾರಗಳಿವೆ. ನಡುಗಡ್ಡೆ ಮತ್ತು ನೀರಿನಿಂದ ಸುತ್ತುವರಿದ ನೀರಿನ ಕೋಟೆ.

೨. ಪಾರ್ವತ: ದೊಡ್ಡ ದೊಡ್ಡ ಬಂಡೆಗಳಲ್ಲಿ ಮತ್ತು ಗವಿಗಳ ರೀತಿಯಲ್ಲಿರುವ ಕೋಟೆಗಳು.

೩. ಧಾನ್ವನ: ನೀರಿಲ್ಲದ ಮರಳು ಭೂಮಿಯಲ್ಲಿ ಮತ್ತು ಕುರುಚಲು ಗಿಡಗಳ ಮಧ್ಯದಲ್ಲಿ ನಿರ್ಮಾಣವಾಗಿರುವುದು.

೪. ವನ: ಅರಣ್ಯ ಮತ್ತು ಜವುಗು ಭೂಮಿಯಲ್ಲಿ ನಿರ್ಮಾಣವಾದ ಕೋಟೆಗಳು.[೮]

ಶುಕ್ರನು ನೀತಿಸಾರದಲ್ಲಿ ೯ ಪ್ರಕಾರದ ಕೋಟೆಗಳ ಬಗ್ಗೆ ನಮೂದಿಸಿದ್ದಾನೆ.

ಪರಿಖಾದ್ಯೈರಿಣಂ ಶ್ರೇಷ್ಠಂ ಪರಿಘಂ ತತೋತುವನಮ್ ।
ತತೋಧನ್ವಂಜನಂ ತಸ್ಮಾದ್ ಗಿರಿದುರ್ಗಂ ತತಃ ಸ್ಮೃತಮ್ ॥

೧. ಐರಿಣ: ಹಳ್ಳ, ಮುಳ್ಳು, ಕಲ್ಲುಗಳಿಂದ ಸುತ್ತುವರೆದಿರುವುದು.

೨. ಪರಿಖ: ಆಳವಾದ ಕಂದಕಗಳಿಂದ ಸುತ್ತುವರೆದಿರುವುದು.

೩. ಪರಿಘ: ಇಟ್ಟಿಗೆ, ಕಲ್ಲು, ಮಣ್ಣಿನಿಂದ ತುಂಬಿದ ಹೊರಗೋಡೆಗಳು

೪. ವನ: ದಟ್ಟವಾದ ಅರಣ್ಯದ ಮಧ್ಯದಲ್ಲಿ ನಿರ್ಮಾಣವಾಗಿರುವುದು.

೫. ಧನ್ವ: ನೀರಿಲ್ಲದ ಒಣಭೂಮಿಯಲ್ಲಿ ನಿರ್ಮಾಣ ಮಾಡಿರುವ ಕೋಟೆಯಾಗಿದೆ.

೬. ಜಲ: ಸುತ್ತಲೂ ನೀರಿನಿಂದ ಆವರಿಸಲ್ಪಟ್ಟಿರುವ ಕೋಟೆಗಳು

೭. ಗಿರಿ: ನೀರಿಲ್ಲದ ನಿರ್ಜನ ಪ್ರದೇಶದಲ್ಲಿ ಕಟ್ಟಿರುವುದಾಗಿದೆ.

೮. ಸೈನ್ಯ: ಶಸ್ತ್ರಾಸ್ತ್ರಗಳಿಂದ ಸಜ್ಜಿತರಾದ ಸೈನಿಕರಿಂದ ಸುತ್ತುವರಿಯಲ್ಪಟ್ಟಿರುವ ಆವರಣ.

೯. ಸಹಾಯ: ಸಂಬಂಧಿಕರ ಮತ್ತು ಸ್ನೇಹಿತರ ಮನೆಗಳಿಂದ ಆವೃತವಾಗಿರುವುದು.[೨]

ಮನುಸ್ಮೃತಿಯಲ್ಲಿ ಸ್ಥಳ, ಕಟ್ಟಲು ಉಪಯೋಗಿಸುವ ಸಾಮಾಗ್ರಿ ಮತ್ತು ಸಂರಕ್ಷಣಾ ವಿಧಾನಗಳ ಆಧಾರದ ಮೇಲೆ ಕೋಟೆಗಳನ್ನು ಆರು ಪ್ರಕಾರಗಳಲ್ಲಿ ವಿಂಗಡಿಸಿದೆ.

೧. ಧನು: ಮರುಭೂಮಿಯಲ್ಲಿ ನಿರ್ಮಿಸಲ್ಪಟ್ಟಿರುವ ಕೋಟೆಗಳು.

೨. ಮಹೀ: ಕಲ್ಲು ಮತ್ತು ಇಟ್ಟಿಗೆಯಿಂದ ಕಟ್ಟುವುದು.

೩. ಜಲ: ಆಳವಾದ ನೀರಿನಿಂದ ಸುತ್ತುವರಿಯಲ್ಪಟ್ಟಿರುವುದಾಗಿದೆ.

೪. ವೃಕ್ಷ: ಎತ್ತರವಾದ ಮರಗಿಡ ಬಳ್ಳಿ ಮುಳ್ಳು ಪೊದೆಗಳಿಂದ ಸುತ್ತುವರೆದಿರುವುದು.

೫. ನರ: ಆನೆ, ಕುದುರೆ, ಕಾಲುದಳ, ರಥಗಳನ್ನೊಳಗೊಂಡ ಚತುರ್ಬಲಗಳಿಂದ ಸಂರಕ್ಷಿಸಲ್ಪಟ್ಟಿರುವುದು.

೬. ಗಿರಿ: ನೀರು ಮತ್ತು ಆಹಾರ ಪದಾರ್ಥ ದೊರೆಯುವ ಕಡಿದಾದ ಬೆಟ್ಟದ ಮೇಲೆ ನಿರ್ಮಾಣವಾಗುವ ಕೋಟೆಗಳಾಗಿವೆ.[೩]

'ಆಕಾಶ ಭೈರವಕಲ್ಪ' ಎಂಬ ಗ್ರಂಥವು ಕೋಟೆಗಳನ್ನು ೮ ಪ್ರಕಾರಗಳಾಗಿ ವಿಂಗಡಿಸಿದೆ.

೧. ಗಿರಿದುರ್ಗ: ಎತ್ತರವಾದ ಬೆಟ್ಟದ ಮೇಲೆ ಅಗಲವಾದ ನೀರಿನಿಂದ ಕೂಡಿದ ಕಡಿದಾದ ಬಂಡೆಗಳನ್ನೊಂದಿದ್ದು, ಅಭೇಧ್ಯವಾದ ಪ್ರದೇಶದಲ್ಲಿ ನಿರ್ಮಾಣವಾಗುವ ಕೋಟೆಗಳು.

೨. ವನದುರ್ಗ: ದಟ್ಟವಾದ ಮುಳ್ಳು ಮರಗಳು, ಪೊದೆಗಳು ಮತ್ತು ಬಳ್ಳಿಗಳಿಂದ ಅರಣ್ಯದಲ್ಲಿ ಕಟ್ಟಿರುವ ಕೋಟೆ.

೩. ಗಹ್ವರದುರ್ಗ: ಸಮತಟ್ಟಿಲ್ಲದ ಕೇವಲ ಕಲ್ಲು ಬಂಡೆಗಳಿರುವ ಭೂಮಿಯ ಮೇಲೆ ಕಟ್ಟಿರುವುದು.

೪. ಜಲದುರ್ಗ: ನೀರಿನ ಮಧ್ಯೆ ದ್ವೀಪದಂತಿರುವುದು.

೫. ಪಂಕದುರ್ಗ: ಸುತ್ತಲು ಕೆಸರು ತುಂಬಿದ್ದು ಜಾರುವ ಕೆಸರಿನ ಮಧ್ಯೆ ಮುಚ್ಚಿಹೋಗಿರು ಕೋಟೆ.

೬. ಮಿಶ್ರದುರ್ಗ: ಕಾಡಿನಲ್ಲಿ ಮತ್ತು ಸುತ್ತಲೂ ಎಲ್ಲ ಕಡೆ ಜವಳು ಭೂಮಿಯಿದ್ದರೆ ಅಥವಾ ಬೆಟ್ಟದ ಮೇಲೆ ಕಟ್ಟಲ್ಪಟ್ಟಿರುವುದು.

೭. ನರದುರ್ಗ: ಸುತ್ತಲೂ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತರಾದ ಸೈನಿಕ ಯೋಧರಿಂದ ಆವರಿಸಲ್ಪಟ್ಟಿರುವ ಆವರಣ.

೮. ಕೋಷ್ಠದುರ್ಗ: ಎತ್ತರವಾದ ಪ್ರಾಕಾರ ಹೊಂದಿರುವುದು.

ಗಿರಿದುರ್ಗದಲ್ಲಿ ಎಂಟು ಪ್ರಕಾರಗಳಿವೆ.

೧. ಭದ್ರಮ: ಒಂದೇ ಬಂಡೆಯ ಮೇಲೆ ನೀರಿರುವ ಎತ್ತರವಾದ ವೃತ್ತಾಕಾರದ ಬಂಡೆಗಳು, ಗುಹೆಗಳು, ಪಥಿಕಾಶ್ರಮಗಳನ್ನು ಹೊಂದಿರುವುದು.

೨. ಅತಿಭದ್ರಮ್: ನೆಲದಿಂದ ಮೇಲಿನವರೆಗೂ ವರ್ಗಾಕಾರದಲ್ಲಿದ್ದು ಅತಿ ಎತ್ತರವಾದ ಅಗಲವಾದ ಗುಹೆಗಳು ಮತ್ತು ನೀರಿನಿಂದ ಆವರಿಸಲ್ಪಟ್ಟಿರುತ್ತದೆ.

೩. ಚಂದ್ರ: ಅತಿ ಅಗಲವಾದ ತುದಿ ಚಂದ್ರನ ಆಕರದಲ್ಲಿದ್ದು, ಬಹಳವಾದ ನೀರಿನಿಂದ ಕೂಡಿದ್ದು, ದೇವತೆಗಳಿಗೂ ಸಹ ಅಗಮ್ಯವಾಗಿರುತ್ತದೆ.

೪. ಅರ್ಧಚಂದ್ರ: ಅರ್ಧ ಚಂದ್ರಾಕಾರವಾಗಿದ್ದು ಅತಿಹೆಚ್ಚು ಎತ್ತರವೂ ಅಲ್ಲದ ಅತಿ ಕಡಿಮೆಯೂ ಅಲ್ಲದ ಗುಹೆಗಳು ಪಥಿಕಾಶ್ರಮಗಳು ಮತ್ತು ನೀರಿನಿಂದ ಕೂಡಿರುತ್ತದೆ.

೫. ನಾಭ: ತಳದಲ್ಲಿ ಸಂಕೀರ್ಣವಾಗಿದ್ದು, ತುದಿಯಲ್ಲಿ ಅಗಲವಾಗಿದ್ದು ಕ್ರಮವಾಗಿ ಹೆಚ್ಚುತ್ತಿದ್ದು ಕಮಲದ ಬೀಜದ ಸಿಂಬಿಯ ಆಕಾರದಲ್ಲಿರುತ್ತದೆ.

೬. ರುಚಿರಮ್: ಸೋಪಾನ ಮಾರ್ಗದ ಮೆಟ್ಟಿಲುಗಳ ಉದ್ದ ಮತ್ತು ಅಗಲಗಳು ಕ್ರಮವಾಗಿ ಅಗಲವಾಗುತ್ತಿದ್ದು ಉಪ್ಪರಿಗೆಯಂತಿರುತ್ತದೆ ಮತ್ತು ಹೆಚ್ಚು ನೀರಿನಿಂದ ಕೂಡಿರುತ್ತದೆ.

೭. ಸುನಾಭ: ತಳದಲ್ಲಿ ಅಗಲವಾಗಿದ್ದು ಮೇಲೆ ಹೋಗುತ್ತಾ ಹೋಗುತ್ತಾ ಚಿಕ್ಕದಾಗಿ ತುದಿಯಲ್ಲಿ ಕಿರಿದಾಗಿರುತ್ತದೆ.

೮. ವರ್ಧಮಾನಮ್: ಮೃದಂಗ ಅಥವಾ ಮದ್ದಲೆಯ ಆಕಾರದಲ್ಲಿರುತ್ತದೆ.[೬೪]

ಮೂರನೇ ಸೋಮೇಶ್ವರನ 'ಮಾನಸೋಲ್ಲಾಸ' ಕೃತಿಯು ೯ ಪ್ರಕಾರದ ಕೋಟೆಗಳನ್ನು ಹೇಳಿದೆ.

೧. ಜಲದುರ್ಗ: ಆಳವಾದ ನೀರಿನಿಂದ ಆವರಿಸಲ್ಪಟ್ಟಿರುವುದು.

೨. ಗಿರಿದುರ್ಗ: ದುರ್ಗಮವಾದ ಬೆಟ್ಟದ ಮೇಲಿನದು.

೩. ಪಾಷಾಣದುರ್ಗ: ಬಂಡೆಗಳಿಂದ ರಚಿಸಿರುವುದು.

೪. ಇಷ್ಟಕ ದುರ್ಗ: ಇಟ್ಟಿಗೆಗಳಿಂದ ಕಟ್ಟಿರುವುದು.

೫. ವೃತ್ತಿಕಾಮಯಮ್: ಮಣ್ಣಿನಿಂದ ಕಟ್ಟಿರುವುದು

೬. ವನದುರ್ಗ: ದಟ್ಟವಾದ ಮುಳ್ಳುಮರಗಳಿಂದ ಆವರಿಸಲ್ಪಟ್ಟಿರುವುದು.

೭. ಮರದುರ್ಗ: ಕೋಟೆಯೊಳಗೆ ಸಾಕಷ್ಟು ನೀರನ್ನು ಸಂಗ್ರಹಿಸಿ ಮರುಭೂಮಿಯಲ್ಲಿ ಕಟ್ಟಿರುವುದು.

೮. ದಾರುಮಯದುರ್ಗ: ಮರ ಮತ್ತು ಬಂಬುಗಳಿಂದ ತಯಾರಿಸಿರುವುದು.

೯. ನರದುರ್ಗ: ಸುತ್ತಲೂ ಶಸ್ತ್ರಸಜ್ಜಿತರಾದ ಯೋಧರನ್ನು ನಿಲ್ಲಿಸಿ ತಯಾರಿಸಿರುವುದು.[೬೫]

ಹೀಗೆ ರಕ್ಷಣೆಯು ರಾಜನಿಗೆ ಅತಿ ಮುಖ್ಯವಾದುದ್ದಾಗಿದೆ. ಏಕೆಂದರೆ ರಾಜನಿಗೆ ಅಳಿವು ಉಳಿವು ಆತನು ರಕ್ಷಣೆಗಾಗಿ ಕೈಗೊಂಡ ಕ್ರಮಗಳನ್ನಾಧರಿಸಿರುತ್ತದೆ. ಆದ್ದರಿಂದ ರಾಜನು ರಕ್ಷಣೆಗಾಗಿ ಮೊದಲ ಆದ್ಯತೆ ನೀಡುತ್ತಾನೆ.

## ಅಡಿಟಿಪ್ಪಣಿಗಳು

೧. ರಾಜನೀತಿ ಪ್ರಕಾಶ, ೧೯೧೬, ವಾರಣಾಸಿ, ಪುಟ-೨೦೨.

೨. ಸೂರ್ಯನಾಥ ಕಾಮತ್, ದೇವರಕೊಂಡಾರೆಡ್ಡಿ ಮತ್ತು ಜಗನ್ನಾಥ್ ಎಸ್.ಎ. (ಸಂ) ೧೯೯೧, ಇತಿಹಾಸದರ್ಶನ ಸಂಪುಟ ೬, ಪುಟ-೧೫೭.

೩. Dishapande P.N., Martha Forts, 1971, Poona University, unpubdished Thesis Page No-16.

೪. ಬೇಂದ್ರೆ ವಾ.ಸೀ., ೧೯೬೫, ಗಡ-ಕೋಟೆ-ದುರ್ಗ; ಆಣಿತ್ಯಾಂಚೀವಾಸ್ತು, ಪುಟ-೬, ೭.

೫. ಕನ್ನಡ ಸಾಹಿತ್ಯ ಪರಿಷತ್ತು, ೨೦೦೧, ಸಂಕ್ಷಿಪ್ತ ಕನ್ನಡ ನಿಘಂಟು, ಪುಟ-೩೩೨.

೬. ತಿಪ್ಪೇಸ್ವಾಮಿ ಎಸ್., ೨೦೦೪, ರಕ್ಷಣಾವಾಸ್ತುಶಿಲ್ಪ: ಚಿತ್ರದುರ್ಗಜಿಲ್ಲೆ(ಅಪ್ರಕಟಿತ ಪ್ರಬಂಧ) ಪುಟ – ೯೯, ೧೦೦.

೭. ಬೆಟಗೇರಿ ಕೃಷ್ಣಶರ್ಮ, ೧೯೫೯, ಕರ್ನಾಟಕ ಜನಜೀವನ, ಪುಟ-೩.

೮. ರಾಜನೀತಿ ಪ್ರಕಾಶ, ಪೂರ್ವೋಕ್ತ, ಪುಟ – ೨೦೩, ೨೦೪.

೯. ಕನ್ನಡ ಸಾಹಿತ್ಯ ಪರಿಷತ್ತು, ೨೦೦೧, ಸಂಕ್ಷಿಪ್ತ ಕನ್ನಡ ನಿಘಂಟು, ಪುಟ-೩೩೨.

೧೦. ಬೇಂದ್ರೆ ವಾ.ಸೀ., ಪೂರ್ವೋಕ್ತ, ಪುಟ-೬.

೧೧. ಯಜುರಾರಣ್ಯಕ, ಪುಟ-೧,೩,೭.

೧೨. ಚನ್ನಬಸಪ್ಪ ಎಸ್. ಪಾಟೀಲ, ೧೯೯೯, ಕರ್ನಾಟಕದ ಕೋಟೆಗಳು ಸಂಪುಟ-೧, ಪುಟ-೧.

೧೩. ಕನ್ನಡ ವಿಷಯ ವಿಶ್ವಕೋಶ, ಸಂಪುಟ-೧, ಪುಟ-೪೦೬.

೧೪. ಸೂರ್ಯನಾಥ ಕಾಮತ್, ದೇವರಕೊಂಡಾರೆಡ್ಡಿ, ಜಗನ್ನಾಥ್ ಎಸ್.ಎ. (ಸಂ) ಪೂರ್ವೋಕ್ತ, ಪುಟ-೧೫೭.

೧೫. ಕರೋವ್ಕಿನ್ ಎಫ್., ೧೯೮೭, ಪುರಾತನ ಜಗತ್ತಿನ ಇತಿಹಾಸ, ಪುಟ-೮೦.

೧೬. ಕನ್ನಡ ವಿಷಯ ವಿಶ್ವಕೋಶ, ಸಂಪುಟ –೧, ಪುಟ-೪೦೬.

೧೭. American Encyclopaedia VoI-VII, Page No-622.

೧೮. ಕರೋವ್ಕಿನ್ ಎಫ್, ಪೂರ್ವೋಕ್ತ, ಪುಟ-೯೪.

೧೯. American Encyclopaedia Vol-VII, Page No-622.

೨೦. ಕರೋವ್ಕಿನ್ ಎಫ್., ಪೂರ್ವೋಕ್ತ, ಪುಟ -೨೪೪, ೨೬೦.

೨೧. ಶ್ರೀನಿವಾಸ ವಿ. ಬಡಿಗೇರ, ೨೦೦೮, ರಕ್ಷಣಾ ವಾಸ್ತುಶಿಲ್ಪ: ಬೆಳಗಾವಿ ಜಿಲ್ಲೆ (ಅಪ್ರಕಟಿತ ಪ್ರಬಂಧ), ಪುಟ-೫೩.

೨೨. ಕರೋವ್ಕಿನ್ ಎಫ್., ಪುರ್ವೋಕ್ತ, ಪುಟ-೧೨೦.

೨೩. ಕನ್ನಡ ವಿಷಯ ವಿಶ್ವಕೋಶ, ಸಂಪುಟ-೧, ಪುಟ-೪೦೭.

೨೪. Weelar Sir Mortimar, 1959, Early India and Pakistan, P-15.

೨೫. ರಾವ್ ಎಸ್.ಆರ್., ೧೯೯೪, ಲೋಥಲ್ ಮತ್ತು ಸಿಂಧೂನಾಗರಿಕತೆ, ಪುಟ-೧೩, ೧೪, ೧೮.

೨೬. ನಾಗೇಗೌಡ ಎಚ್.ಎಲ್. (ಸಂ), ೧೯೬೬, ಪ್ರವಾಸಿಕಂಡ ಇಂಡಿಯ ಸಂಪುಟ-೧, ಪುಟ-೩೩, ೩೪.

೨೭. ಕರೋವ್ಕಿನ್ ಎಫ್., ಪೂರ್ವೋಕ್ತ, ಪುಟ-೧೦೭.

೨೮. ಪಾಟೀಲ ಯ.ರು., ೨೦೦೦, ಸವದತ್ತಿನ ಉಕ್ಕಿನ ಕೋಟೆ, ಪುಟ-೨.

೨೯. ಷೇಕ್ ಅಲಿ ಬಿ. (ಸಂ), ೧೯೯೭, ಕರ್ನಾಟಕ ಚರಿತ್ರೆ ಸಂಪುಟ-೧, ಪುಟ-೩೨೮, ೩೩೦.

೩೦. ಚನ್ನಬಸಪ್ಪ ಎಸ್. ಪಾಟೀಲ್, ಪೂರ್ವೋಕ್ರ, ಪುಟ-೬.

೩೧. ಶೀಲಕಾಂತ ಚಿತ್ತಾರ, ೨೦೦೦, ಬಾದಾಮಿ ಒಂದು ಸಾಂಸ್ಕೃತಿಕ ಅಧ್ಯಯನ, ಪುಟ-೨೭೪.

೩೨. ಚನ್ನಬಸಪ್ಪ ಎಸ್. ಪಾಟೀಲ್, ಪೋರ್ವೋಕ್ತ, ಪುಟ-೭,೮,೧೦.

೩೩. ಶ್ರೀಧರ ಎಚ್.ಜೆ., ೨೦೦೨, ಪ್ರಾಚೀನ ಭಾರತದಲ್ಲಿ ಯುದ್ಧಕಲೆ, ಪುಟ-೧೪೩.

೩೪. ಜೋಶಿ ಎಸ್.ಕೆ., ೨೦೦೦, ಕರ್ನಾಟಕದ ಕೋಟೆಗಳು, ಪುಟ-೧೪೪.

೩೫. ಪ್ರಸನ್ನ ಮೂರ್ತಿ, ಪ್ರಜಾವಾಣಿ, ಭಾನುವಾರ, ೨-೧೨-೨೦೦೨.

೩೬. ಕವಿತಾ ಕೃಷ್ಣ (ಸಂ), ಜಯಮಂಗಲಿ, ೨೦೦೨, ಪುಟ-೪೨.

೩೭. ಎಪಿಗ್ರಾಫಿಯ ಕರ್ನಾಟಕ ಸಂಪುಟ-೧೨, ಪಾವಗಡ-೫೨, ಕ್ರಿ.ಶ. ೧೨೩೨.

೩೮. ಎಪಿಗ್ರಾಫಿಯ ಕರ್ನಾಟಕ ಸಂಪುಟ-೧೨, ಪಾವಗಡ-೫೦, ಕ್ರಿಶ ೧೨೪೮.

೩೯. ಪರಮಶಿವಮೂರ್ತಿ ಡಿ.ವಿ., ೧೯೯೬, ಸಂಶೋಧನೆಯ ಸಿರಿ, ಪುಟ-೧೨,೧೩.

೪೦. ಪ್ರಸನ್ನ ಮೂರ್ತಿ, ಪ್ರಜಾವಾಣಿ, ಭಾನುವಾರ, ೨-೧೨-೨೦೦೭.

೪೧. ಪರಮಶಿವಮೂರ್ತಿ ಡಿ.ವಿ., ಪೂರ್ವೋಕ್ತ, ಪುಟ-೧೩.

೪೨. ನರಸಿಂಹಮೂರ್ತಿ ಕೆ.ಎಲ್., ೧೯೪೯, ಶುಕ್ರನೀತಿಸಾರ, ಪುಟ-೧೦.

೪೩. ರಾಜನೀತಿ ಪ್ರಕಾಶ, ಪೂರ್ವೋಕ್ತ, ಪುಟ-೨೦೦೨.

೪೪. ಲಕ್ಷ್ಮಣ್ ತೆಲಗಾವಿ (ಸಂ), ೨೦೦೬, ಚರಿತ್ರೆ ಅಧ್ಯಯನ ಸಂಪುಟ-೧, ಸಂಚಿಕೆ-೨, ಪುಟ-೧೫೭, ೧೫೮.

೪೫. ಶೇಷ ನವರತ್ನ (ಅನು), ೨೦೦೬, ಮನುಸ್ಮೃತಿ, ಪುಟ-೭೪.

೪೬. ಪಂಚತಂತ್ರ.

೪೭. ದೀಕ್ಷಿತ್ ರಾಮಸ್ವಾಮಿ ಮತ್ತು ರಿತ್ತಿ (ಸಂ), ೨೦೦೦, ನೀತಿವಾಕ್ಯಮೃತಂ, ಪುಟ-೨೧೯.

೪೮. ಲಕ್ಷ್ಮಣ್ ತೆಲಗಾವಿ (ಸಂ), ಪೂರ್ವೋಕ್ತ, ಪುಟ-೧೬೨-೧೬೩.

೪೯. ಶೇಷಶಾಸ್ತ್ರಿ ಆರ್., ೧೯೮೨, ಕನಾಟಕದ ವೀರಗಲ್ಲುಗಳು, ಪುಟ-೧೮೮.

೫೦. ಶ್ರೀಧರ ಹೆಚ್.ಜಿ. ಪೂರ್ವೋಕ್ತ, ಪುಟ-೫೭.

೫೧. Sing, 2002, AP Forts and Fortifcation in India with Special reference to central, P-170.

೫೨. ಅದೇ, ಪುಟ-೧೭೦.

೫೩. ಸಚ್ಚಿದಾನಂದ ಶಂಕರಭಾರತೀ ಸ್ವಾಮಿ (ಅನು), ಕೌಟಿಲ್ಯನ ಅರ್ಥಶಾಸ್ತ್ರ, ಪುಟ-೯೨.

೫೪. ವೆಂಕಟಾಚಲಶಾಸ್ತ್ರೀ ಟಿ.ವಿ. (ಸಂ), ೨೦೦೬, ಪಂಪ ಸಂಪುಟ,- ಪುಟ-೩೬೩.

೫೫. ಶಾಂತಿನಾಥ ದಿಬ್ಬದ, ೨೦೦೬, ನಾಗಚಂದ್ರನ ಸಂಪುಟ, ಪುಟ-೫೯೧.

೫೬. ಜಯಚಂದ್ರ ಎಂ.ಎ., ೨೦೦೬, ಸಾಳ್ವ ಸಂಪುಟ, ಪುಟ-೩೯೬.

೫೭. ವೆಂಕಟಾಚಲಶಾಸ್ತ್ರಿ ಟಿ.ವಿ., ಪೂರ್ವೋಕ್ತ, ಪುಟ-೧೨೬.

೫೮. ಸಚ್ಚಿದಾನಂದ ಶಂಕರಭಾರತೀ ಸ್ವಾಮಿ (ಅನು), ಪೂರ್ವೋಕ್ತ, ಪುಟ-೯೩.

೫೯. ಪರಮಶಿವಮೂರ್ತಿ ಡಿ.ವಿ., ಪೂರ್ವೋಕ್ತ, ಪುಟ-೫೭.

೬೦. ಸಚ್ಚಿದಾನಂದ ಶಂಕರಭಾರತೀ ಸ್ವಾಮಿ (ಅನು), ಪೂರ್ವೋಕ್ತ, ಪುಟ-೯೩.

೬೧. ಅದೇ, ಪುಟ-೯೫.

೬೨. ಪಾಟೀಲಯರು., ಪೂರ್ವೋಕ್ತ, ಪುಟ-೨.

೬೩. ಚೆಲುವರಾಜನ್ ಆರ್., ೧೯೮೭, ಪಾವಗಡ ತಾಲ್ಲೂಕು ದರ್ಶನ, ಪುಟ-೨೪.

೬೪. ವಸು ಎಂ.ವಿ. (ಸಂ), ೨೦೦೧, ದಕ್ಷಿಣ ಕರ್ನಾಟಕದ ಅರಸುಮನೆತನಗಳು, ಪುಟ-೫೭.

೬೫. ಸಚ್ಚಿದಾನಂದ ಶಂಕರಭಾರತೀ ಸ್ವಾಮಿ (ಅನು), ಪೂರ್ವೋಕ್ತ, ಪುಟ-೯೬.

೬೬. ಲಕ್ಷ್ಮಣ್ ತೆಲಗಾವಿ (ಸಂ), ಪೂರ್ವೋಕ್ತ, ಪುಟ-೧೫೨, ೧೫೩.

೬೭. ಶ್ರೀನಿವಾಸ ಪಾ.ಶ., ೨೦೦೭, ತಿರುಕ್ಕುರಳ್, ಪುಟ-೨೨೭-೨೨೯.

೬೮. ಶೇಷಗಿರಿ ಕೆ. ಆರ್. (ಸಂ), ೧೯೮೮, ದೇವಚಂದ್ರ ವಿರಚಿತ ಪೂಜ್ಯಪಾದ ಚರಿತೆ, ಪುಟ-೧೪೬,೧೪೭.

೬೯. ಶಾಮಶಾಸ್ತ್ರಿ ಆರ್. (ಸಂ), ೧೯೭೧, ಗೋವಿಂದ ವೈದ್ಯ ಕಂಠೀರವ ನರಸರಾಜವಿಜಯ, ಪುಟ-೧೯.

೭೦. ಬಿರಾದರ ಎಂ.ಜಿ ಮತ್ತು ಲಠೆ ಎಂ.ಎಸ್. ಹಾಗೂ ಸವದತ್ತಿ ಮಠ ಎಸ್. ಡಿ (ಸಂ), ೧೯೮೭, ಕರಿಬಸವಾರ್ಯ ವಿರಚಿತ ಶ್ರೀ ಕುಮಾರ ವಿಜಯವಿಳಾಸಂ, ಪುಟ-೪೩೮.

೭೧. ಚನ್ನಬಸಪ್ಪ ಎಸ್. ಪಾಟಿಲ, ಪೂರ್ವೋಕ್ತ, ಪುಟ-೨.

೭೨. ಶುಕ್ರನೀತಿ IV, ಭಾಗ-೮೫, ಪದ್ಯ ೫೫.

೭೩. ಚನ್ನಬಸಪ್ಪ ಎಸ್. ಪಾಟೀಲ, ಪೂರ್ವೋಕ್ತ, ಪುಟ-೨.

೭೪. ಸೂರ್ಯನಾಥ ಕಾಮತ್ ಮತ್ತು ದೇವರ ಕೊಂಡಾರೆಡ್ಡಿ ಹಾಗೂ ಜಗನ್ನಾಥ್ ಎಸ್.ಎ. (ಸಂ), ೧೯೯೧, ಇತಿಹಾಸ ದರ್ಶನ, ಪುಟ -೧೬೦, ೧೬೧.

೭೫. ಚನ್ನಬಸಪ್ಪ ಎಸ್. ಪಾಟೀಲ, ಪೂರ್ವೋಕ್ತ, ಪುಟ-೪.

## ಅಧ್ಯಾಯ – ೪

# ನಿಡುಗಲ್ಲು ಪರಿಸರದ ಕೋಟೆಗಳು

### ೧. ನಿಡುಗಲ್ಲು ಕೋಟೆ

ಚಿತ್ರದುರ್ಗ, ಪಾವಗಡ ರಾಜ್ಯ ಹೆದ್ದಾರಿಯಲ್ಲಿ ಪಾವಗಡದಿಂದ ಪಶ್ಚಿಮ ದಿಕ್ಕಿಗೆ ೧೫ ಮೈಲಿಗಳ ಅಂತರದಲ್ಲಿ ರಸ್ತೆಯ ಎಡಭಾಗದಲ್ಲಿರುವ ದುರ್ಗವೇ ನಿಡುಗಲ್ಲು. ಈ ದುರ್ಗವು ಸಮುದ್ರ ಮಟ್ಟದಿಂದ ೩೭೮೯ ಅಡಿ ಎತ್ತರದಲ್ಲಿದ್ದು, ಅತಿ ಎತ್ತರ ಮತ್ತು ಕಡಿದಾಗಿದೆ. ಒಂದೇ ಅಖಂಡ ಶಿಲೆಯು ಶಿಖರದಲ್ಲಿದೆ. ಈ ಭೀಮಾಕೃತಿಯ ಏಕಶಿಲೆಯಿಂದಾಗಿ ನಿಡುಗಲ್ಲು ಎಂಬ ಹೆಸರು ಬಂದಿದೆ.[೧] ನಿಡುಗಲ್ಲು ವಿಷಯವನ್ನು ಕುರಿತು ಈ ಹಿಂದೆ ಬೇರೆ ಬೇರೆ ಹೆಸರುಗಳಿಂದ ಕರೆದಿರುವುದು ಕಾಣಬಹುದಾಗಿದೆ. ಉದಾ: ಚೋರ ಕಥೆಯಲ್ಲಿ 'ನಿಲಾವತಿಪಟ್ಟಣ', ಹರಿವಂಶದ ಶ್ರಾದ್ಧ ಫಲವನ್ನು ಹೇಳುವಾಗ ಒಂದು ಶ್ಲೋಕದಲ್ಲಿ 'ಕಾಳಾಂಜನಗಿರಿ'[೨] ಎಂದೂ, ಕಾಳಾಹಸ್ತೇಶ್ವರ ದೇವಾಲಯದಲ್ಲಿರುವ ಶಾಸನದಲ್ಲಿ ನಿಡುಗಲ್ಲಿನ ಬಗ್ಗೆ ಉಲ್ಲೇಖಿಸಲಾಗಿದೆ. ಹಾಗೆನೇ ಕ್ರಿ.ಶ. ೧೧೩೫ರಲ್ಲಿ ರಚನೆಯಾದ ಹೊಕ್ಕರಣೆ ಶಾಸನದಲ್ಲಿ 'ನಿಡುಗಲ್ಲು' ಎಂದು, ಪಾರ್ಶ್ವನಾಥ ಬಸದಿಯಲ್ಲಿರುವ ಶಾಸನದಲ್ಲಿ ಕಾಳಾಂಜನಗಿರಿ[೩] ಮತ್ತು ಕಾಳಾಂಜನ ಬೆಟ್ಟ, ಕಾಳಾಂಜನ ದುರ್ಗ, ಕಾಳಾಂಜನಾದ್ರಿ ಇತ್ಯಾದಿ ಹೆಸರುಗಳ ಜೊತೆಗೆ ಚನ್ನಪ್ಪ ಕವಿಯ ನಿಡುಗಲ್ಲು ದುರ್ಗಾಷ್ಟಕ ಎನ್ನುವ ಹಾಡೊಂದರಲ್ಲಿ 'ಕಾಳಾಂಜನಾದ್ರಿ' ಎಂಬ ಹೆಸರಿನಿಂದ ಕರೆಯಲಾಗಿರುವುದನ್ನು ಗಮನಿಸಬಹುದಾಗಿದೆ.

ಕ್ರಿ ಶ. ೪೮೭ರ ತಾಮ್ರಶಾಸನದ ಪ್ರಕಾರ ಈ ಪ್ರದೇಶವು ಮೊದಲ ಬಾರಿಗೆ ಗಂಗರ ದುರ್ವಿನೀತನ ಆಳ್ವಿಕೆಗೆ ಒಳಪಡುತ್ತದೆ. ಈತನ ಕಾಲದಲ್ಲಿ ಈ ಪ್ರದೇಶವನ್ನು ಒಳಗೊಂಡು

ತುಮಕೂರನ್ನು 'ಸುಜನ ಜನಪದ' ಎಂದು ವರ್ಣಿಸಿದೆ. ನಂತರ ಇವರ ಸಾಮಂತರಾಗಿದ್ದ ಹೆಂಜೇರಿನ ನೊಳಂಬ ಪಲ್ಲವರು ಈ ಪ್ರದೇಶವನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡು ಕೋಟೆಯ ನಿರ್ಮಾಣವನ್ನು ಆರಂಭಿಸಿರುವ ಕುರಿತು ಜನಪದ ಸಾಹಿತ್ಯದಲ್ಲಿ ಉಲ್ಲೇಖವಾಗಿದೆ. ಆದರೆ ಶಾಸನೋಕ್ತವಾದ ಯಾವುದೇ ದಾಖಲೆ ದೊರೆತಿಲ್ಲ. ನೊಳಂಬ ಮಂಗಳನು ನಿಡುಗಲ್ಲಿನಲ್ಲಿ ಒಂದು ವಿದ್ಯಾಕೇಂದ್ರವನ್ನು ಸ್ಥಾಪಿಸಿದನು. ಇವನನ್ನು ಶಾಸನಗಳು 'ಕರ್ನಾಟೈನೃತ' ಮಂಗಳಾಂಕ್ಯನೃಪತೆ' ಎಂದು ಹೊಗಳಿವೆ.[೫] ನೊಳಂಬ ಪಲ್ಲವರು ಕೆಲವು ಕಾಲ ಪೂರ್ವ ಚಾಳುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಳುಕ್ಯರ ಸಾಮಂತರಾಗಿ ಆಳ್ವಿಕೆ ಮಾಡಿರುವುದರ ಬಗ್ಗೆ ಶಾಸನಗಳಲ್ಲಿ ಉಲ್ಲೇಖವಾಗಿದೆ. ಇವರ ನಂತರ ಈ ಪ್ರದೇಶವನ್ನು ನಿಡುಗಲ್ಲು ಚೋಳರು ತಮ್ಮ ಅಧೀನಕ್ಕೆ ತೆಗೆದುಕೊಂಡರು. ನಿಡುಗಲ್ಲು ಚೋಳರ ಮೊದಲನೆ ಇರುಂಗೋಳನು ಕ್ರಿ.ಶ. ೧೧೦೬ರಲ್ಲಿ ನಿಡುಗಲ್ಲು ದುರ್ಗಕ್ಕೆ ಮೊದಲ ಬಾರಿಗೆ ಕೋಟೆಗೆ ಅಡಿಪಾಯ ಹಾಕಿದನು ಎಂದು ಶಾಸನಗಳು ಉಲ್ಲೇಖಿಸುತ್ತವೆ.[೬] ಇವನ ಉತ್ತರಾಧಿಕಾರಿಗಳು ಕೋಟೆಯ ನಿರ್ಮಾಣ ಕಾರ್ಯವನ್ನು ಮುಂದುವರೆಸಿದರು. ಕಲ್ಯಾಣ ಚಾಳುಕ್ಯರ ಜಗದೇಕ ಮಲ್ಲನು ಕೋಟೆಯಲ್ಲಿ ಕೆಲವು ಕಟ್ಟಡಗಳನ್ನು ಮತ್ತು ೧೧೫೦ರಲ್ಲಿ ನಾಗೇಶ್ವರ ದೇವಾಲಯವನ್ನು ನಿರ್ಮಿಸಿದನು.[೭] ಇವರ ನಂತರ ಹೊಯ್ಸಳರು ಕೆಲವು ಕಾಲ ತಮ್ಮ ಅಧೀನಕ್ಕೆ ತೆಗೆದುಕೊಂಡರು. ನಗರೇಶ್ವರ ಮತ್ತು ಸೋಮೇಶ್ವರ ದೇವಾಲಯಗಳು ಇವರ ವಾಸ್ತು ಶೈಲಿಯನ್ನು ಹೋಲುತ್ತವೆ. ನಂತರ ವಿಜಯನಗರದ ಅರಸರ ಅಧೀನರಾಗಿ ನಿಡುಗಲ್ಲು ನಾಯಕರು ಅಧಿಕಾರ ವಹಿಸಿಕೊಂಡರು. ಇವರ ಆಳ್ವಿಕೆಯ ಕಾಲದಲ್ಲೇ ಕೋಟೆಯು ನವೀಕರಣಗೊಂಡಿತು. ನಿಡುಗಲ್ಲು ನಾಯಕರಲ್ಲಿ ಚಿಕ್ಕ ತಿಪ್ಪರಾಜೇಂದ್ರನೇ ಪ್ರಬಲ ಅರಸನಾಗಿದ್ದು, ತನ್ನ ರಾಣಿಯ ನೆನಪಿಗಾಗಿ ಬೆಟ್ಟದ ಮೇಲೆ ಸೀಗಲಗುಡ್ಡ ಎಂಬಲ್ಲಿ ಕೆರೆಯನ್ನು ಕಟ್ಟಿಸಿ, ಅಗ್ರಹಾರವನ್ನು ನಿರ್ಮಿಸಿ ಬ್ರಾಹ್ಮಣರಿಗೆ ಧಾರೆಯೆರೆದನು. ಜೊತೆಗೆ ಲಕ್ಷ್ಮಣೇಶ್ವರ ಎಂಬ ದೇವಾಲಯವನ್ನು ನಿರ್ಮಿಸಿದನು. ಈತನ ಒಂದು ಶಾಸನದಲ್ಲಿ ನಿಡುಗಲ್ಲನ್ನು ಹೊಗಳಲಾಗಿದೆ.[೮] ಇವನ ನಂತರ ಬೊಮ್ಮನಾಯಕನು ನಿಡುಗಲ್ಲಿನಲ್ಲಿ ಸ್ಥಳಗುಡ್ಡಗಳು ಬಹಳವಾಗಿ ಇದ್ದುದರಿಂದ ಇದು ಸ್ಥಳ ಆಸರೆಯಾಗಿದೆ ಎಂದು ನೆಲಕೋಟೆ ಪೇಟೆಯನ್ನು ಕಟ್ಟಿಸಿದನು.[೯]

ನಿಡುಗಲ್ಲು ನಾಯಕರ ನಂತರ ಈ ಪ್ರದೇಶದಲ್ಲಿ ಹರತಿ–ನಿಡುಗಲ್ಲು ಪಾಳೆಯಗಾರರು ಅಧಿಕಾರ ವಹಿಸಿಕೊಂಡರು. ಇವರ ಆಳ್ವಿಕೆಯ ವೇಳೆಗೆ ಕೋಟೆಯು ಅನೇಕ ಮಾರ್ಪಾಡುಗಳೊಂದಿಗೆ ಅಭೇದ್ಯ ಕೋಟೆಯಾಗಿತ್ತು. ಈ ಕಾರಣದಿಂದಲೇ ಹರತಿ ತಿಮ್ಮಣ್ಣನಾಯಕನ ಕಾಲದಲ್ಲಿ ಮೊಗಲರ ಅಧಿಕಾರಿಗಳಾದ ಬೂದಿಲಿಂಗಪ್ಪ ಮತ್ತು ಸಿದ್ದಪ್ಪ ಎಂಬುವರು ನಿಡುಗಲ್ಲಿನ ಮೇಲೆ ಮುತ್ತಿಗೆ ಹಾಕಿದಾಗ ಮೂರು ವರ್ಷಗಳವರೆಗೆ ವಶಪಡಿಸಿಕೊಳ್ಳಲು ಸಾಧ್ಯವಾಗಲಿಲ್ಲ.

ಕೊನೆಗೆ ಕೋಟೆಯಲ್ಲಿದ್ದ ಆಹಾರ ಪದಾರ್ಥ, ಮದ್ದುಗುಂಡು ಖಾಲಿಯಾದ ಮೇಲೆ ಪೆನುಗೊಂಡೆಯಲ್ಲಿ ಅಧಿಕಾರಕ್ಕೆ ಬಂದಿದ್ದ ವಿಜಯನಗರ ಅರಸರ ನೆರವು ಪಡೆಯಲು ಗುಪ್ತಮಾರ್ಗದಿಂದ ಹೊರ ಬಂದು ಸೈನ್ಯವನ್ನು ನಿಡುಗಲ್ಲಿಗೆ ತರುವಾಗ ರಾಯದುರ್ಗದ ಪಾಳೆಯಗಾರರ ಮೋಸದಿಂದ ನಿಡುಗಲ್ಲು ಕೋಟೆಯನ್ನು ಕಳೆದುಕೊಳ್ಳಬೇಕಾಯಿತು. ನಂತರ ಸಿದ್ದಪ್ಪ ಮರಣ ಹೊಂದಿದ ಮೇಲೆ ಪುನಃ ನಿಡುಗಲ್ಲನ್ನು ಮರಳಿ ಪಡೆದನು. ೧೭೫೧ರಲ್ಲಿ ಅಧಿಕಾರಕ್ಕೆ ಬಂದ ತಿಮ್ಮಣ್ಣನಾಯಕನ ಕಾಲದಲ್ಲಿ ಹೈದರ್-ಟಿಪ್ಪು ನಿಡುಗಲ್ಲಿಗೆ ಮುತ್ತಿಗೆಹಾಕಿ ಬಲವಂತವಾಗಿ ಬ್ರಿಟಿಷರ ವಿರುದ್ಧ ಹೋರಾಡಲು ಸೈನ್ಯವನ್ನು ಕಳಿಸಬೇಕೆಂದನು. ಇದಕ್ಕೆ ಒಪ್ಪದ ನಿಡುಗಲ್ಲು ಪಾಳೆಯಗಾರರನ್ನು ಸೋಲಿಸಿ ನಿಡುಗಲ್ಲನ್ನು ಹಾಳು ಮಾಡಿದನು. ತಿಮ್ಮಣ್ಣ ನಾಯಕನ ಇಬ್ಬರು ಮಕ್ಕಳಾದ ಹೊಟ್ಟೆಣ್ಣನಾಯಕ ಮತ್ತು ಇಮ್ಮಡಿ ಹೊಟ್ಟಣ್ಣನಾಯಕರನ್ನು ಬಂಧಿಸಿ ಗಲ್ಲಿಗೇರಿಸಿದನು. ಇಲ್ಲಿಗೆ ನಿಡುಗಲ್ಲು ಅರಸು ಮನೆತನದ ಆಳ್ವಿಕೆ ಮುಕ್ತಾಯವಾಗಿ ಮೈಸೂರು ಒಡೆಯರ ಅಧೀನಕ್ಕೆ ಒಳಪಟ್ಟಿತ್ತು.[೧೦]

**೪.೧. ನಿಡುಗಲ್ಲು ಕೋಟೆಯ ಲಕ್ಷಣಗಳು.**

ಕರ್ನಾಟಕದಲ್ಲಿನ ಕೋಟೆಗಳೆಲ್ಲೆಲ್ಲಾ ಅತ್ಯಂತ ವಿಶಾಲವಾದ ಸ್ಥಳವನ್ನು ಹುದುಗಿಸಿಕೊಂಡಿರುವ ಅತಿ ದುರ್ಗಮಯವಾದ ಸಕಲ ಸಿರಿಸಂಪತ್ತುಗಳಿರುವ ಕೋಟೆ ಎಂದು ವರ್ಣಿತವಾಗಿರುವ ನಿಡುಗಲ್ಲು ಕೋಟೆಯು ಆಯತಾಕಾರ ತಲವಿನ್ಯಾಸ ಹೊಂದಿದೆ. ಕೋಟೆಯನ್ನು ಪ್ರವೇಶಿಸಲು ದಕ್ಷಿಣ ದಿಕ್ಕಿಗಿರುವ ಸೀರಾ ಅಥವಾ ಸಿನ್ನ ಕೋಟೆಯ ಊರ ಬಾಗಿಲನ್ನು ಬಳಸಬೇಕಾಗಿದೆ. ಆದರೆ ಕೋಟೆಗೆ ಮುಖ್ಯದ್ವಾರ ಪೂರ್ವದಿಕ್ಕಿನಲ್ಲಿದ್ದು, ಸ್ಥಳೀಯರು ಇದನ್ನು ಪಾಗೊಂಡೆ ಕೋಟೆ ಊರಬಾಗಿಲು ಎನ್ನುತ್ತಾರೆ. ಈ ಮಹಾದ್ವಾರದ ರಚನೆ ಚಿತ್ರದುರ್ಗದ ಕೋಟೆ ಮತ್ತು ಗುಮ್ಮನಾಯಕನಹಳ್ಳಿ ಕೋಟೆಯ ಮಹಾದ್ವಾರದ ರೀತಿಯೇ ಇದ್ದು,[೧೧] ಹೊರಗಿನಿಂದ ಧಾಳಿ ಮಾಡುವವರಿಗೆ ಸುಲಭವಾಗಿ ನುಗ್ಗಲು ಆಗದಂತೆ ಅನಿರೀಕ್ಷಿತ ತಿರುವುಗಳಿಂದ ಕೂಡಿದ್ದು, ರಕ್ಷಣಾ ದೃಷ್ಟಿಯಿಂದ ವಾಸ್ತು ಬದ್ಧವಾಗಿದೆ. ಕೋಟೆಯ ಗೋಡೆಯ ರಚನೆಯು ಬೃಹದಾಕಾರವಾಗಿದ್ದು, ತಳಭಾಗ ೧೨ ಅಡಿ ದಪ್ಪ ೧೫ ಅಡಿ ಎತ್ತರವಾಗಿದೆ. ಕೋಟೆಯ ನಿರ್ಮಾಣಕ್ಕೆ ಬೃಹತ್ತಾದ ಚೌಕಾಕಾರದ ಕಲ್ಲುಗಳನ್ನು ಬಳಸಿಕೊಂಡಿದ್ದಾರೆ. ಗೋಡೆಗೆ ರಕ್ಷಣೆ ನೀಡಲು ಒಳಭಾಗದಲ್ಲಿ ಕಲ್ಲು, ಮಣ್ಣು, ಇಟ್ಟಿಗೆಯನ್ನು ತುಂಬಿದ ಇಳಿವೊರೆಗಳನ್ನು ನಿರ್ಮಿಸಿದ್ದಾರೆ. ಕೆಲವು ಕಡೆ ಕೋಟೆಗೆ ಗಾರೆಯನ್ನು ಬಳಸಿದ್ದಾರೆ. ಗೋಡೆಯ ಮೇಲ್ಭಾಗದಲ್ಲಿ ಮಣ್ಣಿನ ತೆನೆಗಳು, ಅಂಬುಗಂಡಿಗಳು, ಕಿಂಡಿಗಳನ್ನು ನಿರ್ಮಿಸಿದ್ದಾರೆ. ಗೋಡೆಯ ಹೊರಭಾಗದಲ್ಲಿ ಸುತ್ತಲೂ ಆಳವಾದ ಕಂದಕಗಳನ್ನು ಮಾಡಿದ್ದಾರೆ. ಕೆಲವು ಕಡೆ ಮಳೆಯ ನೀರು ಕೋಟೆಯ ಗೋಡೆಯ ಮೇಲೆ ಬಿದ್ದು ಗೋಡೆಯು ಹಾಳಾಗಬಾರದೆಂದು ಗಾರೆಯಿಂದ ಇಳಿಜಾರುಗಳನ್ನು

ಮಾಡಲಾಗಿದೆ. ಕೋಟೆಯ ಗೋಡೆಗೆ ರಕ್ಷಣೆ ನೀಡಲು ವೃತ್ತಾಕಾರದ ಕೊತ್ತಲುಗಳನ್ನು ಕಟ್ಟಿಸಿದ್ದಾರೆ. ಕೋಟೆಯ ಅಷ್ಟದಿಕ್ಕುಗಳಿಗೂ ಅಷ್ಟ ದುರ್ಗಿಯರ, ಅಷ್ಟ ಭೈರವನ, ಅಷ್ಟಗಣಪತಿಗಳ ಹದ್ದಿನ ಕಾವಲು[೬೨] ಇದ್ದುದರಿಂದ ನಿಡುಗಲ್ಲನ್ನು ಅಶ್ವಪತಿಯಾಗಲಿ, ಗಜಪತಿಯಾಗಲಿ ಸಮೀಪಿಸುತ್ತಿರಲಿಲ್ಲ ಎಂಬ ನಂಬಿಕೆಯಿತ್ತು.

ನಿಡುಗಲ್ಲು ಕೋಟೆಯು ಏಳುಸುತ್ತಿನಿಂದ ಕೂಡಿದ್ದು, ಆಯಾತಾಕಾರದ ರಚನೇನ್ನು ಹೊಂದಿದೆ. ಮೊದಲನೇ ಸುತ್ತು ವೀರಭದ್ರನ ಕೋಟೆಯಾಗಿದ್ದು, ಇದರಲ್ಲಿ ಪಾಗೊಂಡೆ, ಊರಬಾಗಿಲು ವಜ್ರದ ಊರಬಾಗಿಲು, ಸಿರಾ ಅಥವಾ ಸಿನ್ನ ಕೋಟೆಯ ಊರಬಾಗಿಲುಗಳಿವೆ. ಸಿರಾ ಕೋಟೆ ಊರಬಾಗಿಲು ಎರಡೂ ಕಡೆಯೂ ಎತ್ತರದ ವೇದಿಕೆಯ ಮೇಲೆ ತೆರೆದ ಮಂಟಪಗಳಿವೆ. ಈ ಮಂಟಪದ ಕಂಬಗಳು ಒರಟು ಕಲ್ಲಿನಿಂದ ಕೂಡಿವೆ. ವಜ್ರದ ಊರಬಾಗಿಲು ರಕ್ಷಣೆಯ ದೃಷ್ಟಿಯಿಂದ ಶತ್ರುಗಳಿಗೆ ಅಭೇದ್ಯವಾದ ದ್ವಾರವಾಗಿತ್ತು. ಗಾರೆಯಿಂದ ಅಲಂಕೃತವಾಗಿದ್ದು, ಮೇಲ್ಭಾಗದಲ್ಲಿ ಕೀರ್ತಿಮುಖವಿದೆ. ದ್ವಾರದ ಎರಡೂ ಬದಿಯಲ್ಲಿ ಎತ್ತರದ ಮಂಟಪಗಳಿವೆ. ದ್ವಾರಕ್ಕೆ ಮರದ ಬಾಗಿಲು ಇತ್ತು ಎಂದು ಸ್ಥಳೀಯರು ಹೇಳುತ್ತಾರೆ. ಇದರ ಪಕ್ಕದಲ್ಲಿ ದಿಡ್ಡಿ ಬಾಗಿಲಿದೆ. ಭಿತ್ತಿಯಲ್ಲಿ ಸಿಂಹ, ಆನೆ, ಹುಲಿ, ಕೂರ್ಮ, ವೃಶ್ಚಿಕ, ಸೈನಿಕರು ರಥದೊಂದಿಗೆ ಕಾಳಗಕ್ಕೆ ಹೊರಟಿರುವ ಶಿಲ್ಪ ಹೂಬಳ್ಳಿಗಳು, ಸ್ಥಳೀಯರು ಕರೆಯುತ್ತಿರುವ ಮಂದೆಲೋರ ಮತ್ತು ಎಮ್ಮೆಲೋರು ಹೆಣ್ಣುಮುಗಳ ಉಬ್ಬುಶಿಲ್ಪಗಳಿವೆ. ಬಹುಶಃ ಇವು ಲಜ್ಜಾಗೌರಿಶಿಲ್ಪಗಳಾಗಿರಬಹುದು. ಅಲ್ಲದೆ ಈ ಸುತ್ತಿನ ಕೋಟೆಯಲ್ಲಿ ಹಲವು ದೇವಾಲಯಗಳಿವೆ. ಅವುಗಳಲ್ಲಿ ಪಾರ್ಶ್ವನಾಥ ಬಸದಿ ಸರಳವಾಗಿದ್ದು, ಗರ್ಭಗೃಹದಲ್ಲಿ ಶಾಸನೋಕ್ತ ಕಪ್ಪುಶಿಲೆಯ ಪಾರ್ಶ್ವನಾಥ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ನವರಂಗದಲ್ಲಿ ೯ ಕಂಬಗಳು, ಮುಖಮಂಟಪದಲ್ಲಿ ೪ ಕಂಬಗಳು ಹಾಗೂ ಪಾತಾಳಾಂಕಣದಲ್ಲಿ ೪ ಕಂಬಗಳಿವೆ. ಆದಿನಾರಾಯಣ ದೇವಾಲಯದಲ್ಲಿ ಗರುಡಪೀಠದ ಮೇಲೆ ನಾರಾಯಣ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಇದು ಚತುರ್ಭುಜದ ಮೂರ್ತಿಯಾಗಿದ್ದು, ಶಂಖ, ಪದ್ಮ, ಗದಾ ಮತ್ತು ಚಕ್ರಗಳಿವೆ. ಬಾಗಿಲವಾಡದಲ್ಲಿ ದ್ವಾರಪಾಲಕರ ಮೂರ್ತಿಗಳು ಇವೆ.

ಲಕ್ಷ್ಮೀನರಸಿಂಹ ದೇವಾಲಯ ಹೊಯ್ಸಳ ಮತ್ತು ದ್ರಾವಿಡ ಶೈಲಿಯಲ್ಲಿದ್ದು,[೬೩] ಗರ್ಭಗೃಹದ ಬಾಗಿಲವಾಡದಲ್ಲಿ ದಶಾವತಾರವನ್ನು ಹಾಗೂ ಪೂರ್ಣಕುಂಭಗಳ ಶಿಲ್ಪಗಳನ್ನು ಚಿತ್ರಿಸಲಾಗಿದೆ. ನವರಂಗದಲ್ಲಿ ೯ ಅರೆಗಂಬಗಳು ೪ ಪೂರ್ಣಕಂಬಗಳಿದ್ದು, ಇವುಗಳಲ್ಲಿ ಸ್ತ್ರೀಯರ ವಿವಿಧ ನೃತ್ಯ ಭಂಗಿಗಳು, ಹಂಸಗಳು, ಪದ್ಮಾಸನದಲ್ಲಿ ಕುಳಿತ ವ್ಯಕ್ತಿಯ ಶಿಲ್ಪಗಳು, ಹಾಗೂ ಆನೆ, ಆಂಜನೇಯ, ಮೂರು ಮುಖವಿರುವ ಒಂದೇ ದೇಹದ ಜಿಂಕೆ, ವಿಷ್ಣುವಿನ ಆಯುಧಗಳಾದ ಶಂಖ, ಪದ್ಮ, ಚಕ್ರ ಹಾಗೂ ಮತ್ಸ್ಯದ ಮೇಲೆ ಕುಳಿತ ವಿಷ್ಣುವಿನ ಶಿಲ್ಪ, ಸಿಂಹ ಮೊದಲಾದ

ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ದೇವಕೋಷ್ಟಕದಲ್ಲಿ ನಾಗರ ಮತ್ತು ಕೇಶವ ಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿದೆ. ನವರಂಗದ ಪೂರ್ವಭಾಗದ ದ್ವಾರದಲ್ಲಿ ದ್ವಾರಪಾಲಕರ ಶಿಲ್ಪಗಳಿವೆ. ಮುಖಮಂಟಪದಲ್ಲಿ ಎರಡು ಕಡೆ ಮಾತ್ರ ಗೋಡೆ ಇದೆ. ಮುಖಮಂಟಪದ ಮುಂದೆ ಬಲಿಪೀಠವಿದ್ದು, ಎರಡೂ ಬದಿಯಲ್ಲಿ ಆಂಜನೇಯನ ಚಿಕ್ಕ ಗುಡಿಗಳಿವೆ.

ನಗರೇಶ್ವರ ದೇವಾಲಯವು ಪೂರ್ವ ಮತ್ತು ದಕ್ಷಿಣದಲ್ಲಿ ದ್ವಾರಗಳನ್ನೊಂದಿದ್ದು, ಉತ್ತರ ಮತ್ತು ಪಶ್ಚಿಮ ಗರ್ಭಗೃಹದಲ್ಲಿ ಯಾವುದೇ ಮೂರ್ತಿಗಳಿಲ್ಲ. ದ್ವಾರದಲ್ಲಿ ಮಾತ್ರ ದ್ವಾರಪಟ್ಟಿಕೆಗಳಿವೆ. ಮಹಾಮಂಟಪದಲ್ಲಿ ೧೨ ಅರೆಗಂಬ, ೪ ಪೂರ್ಣಕಂಬಗಳಿವೆ. ಇವು ಯಾವುದೇ ಅಲಂಕಾರವಿಲ್ಲದೆ ಸರಳವಾಗಿದೆ. ದೇವಾಲಯದ ಶಿಖರದಲ್ಲಿ ಗಾರೆಯಿಂದ ಕೂಡಿದ ಒಂದೇ ದೇಹದ ಎರಡು ಮುಖವುಳ್ಳ ನಂದಿಯ ಶಿಲ್ಪಗಳು, ದೇವಕೋಷ್ಟಕಗಳಲ್ಲಿ ವಿವಿಧ ದೇವತಾಶಿಲ್ಪಗಳು, ಸ್ತ್ರೀಪುರುಷರ ವಿವಿಧ ಭಂಗಿಯ ಶಿಲ್ಪಗಳು, ಲತಾ ಪಟ್ಟಿಕೆಗಳು ಕುಸುರಿ ಕೆತ್ತನೆಯಿಂದ ಕೂಡಿವೆ. ದೇವಾಲಯದ ಆವರಣದಲ್ಲಿ ೬ ಅಡಿ ಎತ್ತರದಿಂದ ಹಿಡಿದು ೨೨ ಅಡಿ ಎತ್ತರದವರೆಗಿನ ಮಹಾಸತಿಗಲ್ಲುಗಳಿವೆ. ದೇವಾಲಯದ ಸುತ್ತಲೂ ಪ್ರಾಕಾರ ಗೋಡೆಯಿದ್ದು ದ್ವಾರದಲ್ಲಿ ಶಿಖರವಿದೆ.

ಸೋಮೇಶ್ವರ ದೇವಾಲಯವು ಗರ್ಭಗುಡಿ, ಸುಖನಾಡಿ ನವರಂಗಗಳಿಂದ ಕೂಡಿದೆ. ಗರ್ಭಗುಡಿಯಲ್ಲಿ ಶಿವಲಿಂಗವಿದೆ. ನವರಂಗವು ನಂದಿ ಹಾಗೂ ನಾಟ್ಯ ಮಂಟಪಗಳನ್ನು ಹೊಂದಿದೆ. ೧೦ ಅರೆಗಂಬಗಳು, ೪ ಪೂರ್ಣಕಂಬಗಳಿವೆ. ದೇವಕೋಷ್ಟಕಗಳಲ್ಲಿ ಯಾವ ಶಿಲ್ಪಗಳು ಇಲ್ಲ. ಕಲ್ಯಾಣ ಚಾಲುಕ್ಯರ ಕಾಲದ್ದು ಎನ್ನಲಾದ ಎರಡು ಮಹಿಷಾಸುರ ಮರ್ದಿನಿ ಶಿಲ್ಪಗಳಿವೆ ಜೊತೆಗೆ ಸಪ್ತಮಾತೃಕೆಯ ನಾಗಶಿಲ್ಪಗಳು ಹಾಗೂ ಒಂದು ಶಾಸನವಿದೆ. ದ್ವಾರದಲ್ಲಿ ಶಿವಪಾರ್ವತಿಯರ ಶಿಲ್ಪಗಳು, ಅಲಂಕಾರಿಕ ಪಟ್ಟಿಕೆಗಳು ಲಲಾಟಬಿಂಬದಲ್ಲಿ ಗಜಲಕ್ಷ್ಮೀಯ ಶಿಲ್ಪವಿದೆ. ದೇವಾಲಯದ ಆವರಣದಲ್ಲಿ ವೀರಗಲ್ಲು, ಸತಿಗಲ್ಲುಗಳಿವೆ. ತಿಪ್ಪೇಸ್ವಾಮಿ ದೇವಾಲಯ ಯಾವುದೇ ಅಲಂಕಾರವಿಲ್ಲದೆ ಗರ್ಭಗುಡಿ ಮತ್ತು ಮುಖಮಂಟಪಗಳಿಂದ ಕೂಡಿದೆ.

ವೀರಭದ್ರ ದೇವಾಲಯ ಆವರಣದಲ್ಲಿ ಶಿವ ದೇವಾಲಯ, ಸೂರ್ಯ ದೇವಾಲಯ, ಬಸವಣ್ಣನಗುಡಿ, ಗಾಳಿಮಂಟಪವಿದೆ. ಈ ಗಾಳಿಮಂಟಪವು ವಾಸ್ತುಬದ್ಧವಾಗಿ ನಿರ್ಮಾಣವಾದ ಕಟ್ಟಡವಾಗಿದೆ. ಏಕೆಂದರೆ ಈ ಮಂಟಪವನ್ನು ಪ್ರವೇಶಿಸಿದಾಗ ಎಂತಹ ಬಿರುಬಿಸುಲಿನಲ್ಲೂ ತಂಪಾದ ಗಾಳಿ ಬರುವುದರಿಂದ ಖಗೋಳಶಾಸ್ತ್ರಬದ್ಧವಾಗಿ ನಿರ್ಮಾಣವಾಗಿದೆ ಎನ್ನಬಹುದು. ದುರ್ಗಮ್ಮ ದೇವಾಲಯ, ರಂಗವೇಗಿ ದೇವಾಲಯ, ಕಾವಲುಗೋಪುರ, ಮಣ್ಣಿನ ವೀರಭದ್ರಗುಡಿ, ಈರಮ್ಮ ದೇವಾಲಯ, ಸೀಗೆಬಾವಿ, ಕಲ್ಯಾಣಿಗಳು, ರಂಗವೇಗಿ ಬಾವಿ, ವಸತಿ ಕಟ್ಟಡಗಳು, ಅಧಿಕಾರಿಗಳ ಕಟ್ಟಡಗಳು, ಮೊದಲಾದ ಅವಶೇಷಗಳು ಮೊದಲನೇ ಸುತ್ತಿನ ಕೋಟೆಯಲ್ಲಿವೆ.

ಕೋಟೆಯ ಎರಡನೇ ಸುತ್ತು ಬೆಸ್ತರ ಕೋಟೆಯಾಗಿದ್ದು, ಈ ಕೋಟೆಯ ದ್ವಾರವನ್ನು ಸೀಮಲಯ್ಯನ ದ್ವಾರಬಾಗಿಲು ಎಂದು ಕರೆಯುತ್ತಾರೆ. ಇದರ ಎರಡೂ ಬದಿಗಳಲ್ಲಿ ಬೃಹತ್ ಚೌಕಾಕಾರದ ಕೊತ್ತಲಗಳಿದ್ದು, ಇವು ಭದ್ರವಾದ ದ್ವಾರಬಾಗಿಲಂತಿವೆ. ಅಲ್ಲದೆ ಇವು ಅನೇಕ ತಿರುವುಗಳಿಂದ ಕೂಡಿರುವುದರಿಂದ ಶತ್ರುಗಳು ಸುಲಭವಾಗಿ ದಾಳಿ ಮಾಡಲು ಸಾಧ್ಯವಾಗುತ್ತಿರಲಿಲ್ಲ ಎಂದು ಹೇಳಬಹುದು. ಬಲಭಾಗದಲ್ಲಿ ಸೈನಿಕರ ಮತ್ತು ಜನವಸತಿಯ ನೆಲೆಯು ಇತ್ತು ಎನ್ನಲು ಸಾಕಷ್ಟು ಅವಶೇಷಗಳು ದೊರೆತಿವೆ. ಸೀಮಲಯ್ಯನ ದೇವಾಲಯವು ಹೊಯ್ಸಳರ ಶೈಲಿಯಂತಿದ್ದು, ಈ ದೇವಾಲಯದ ಬಾಗಿಲವಾಡದಲ್ಲಿ ಅಲಂಕಾರ ಪಟ್ಟಿಕೆಗಳಿವೆ ಶಿವನ ಮತ್ತು ನಂದಿಯ ಶಿಲ್ಪಗಳು ಮಣ್ಣಿನಲ್ಲಿ ಹೂತುಹೋಗಿವೆ. ಈ ಕೋಟೆಯ ದ್ವಾರಬಾಗಿಲಲ್ಲಿ ನಾಗಶಿಲ್ಪ ಮತ್ತು ರುಂಡಮಾತ್ರವಿರುವ ಶಿಲ್ಪಗಳು ತೆರೆದ ಮಂಟಪದಲ್ಲಿವೆ. ಬಹುಶಃ ಈ ಶಿಲ್ಪದ ಕೆಲವು ಲಕ್ಷಣಗಳಿಂದ ದುರ್ಗಿಯ ಶಿಲ್ಪವಾಗಿರಬಹುದೆಂದು ಊಹಿಸಬಹುದಾಗಿದೆ.

ಮೂರನೇ ಸುತ್ತು ಭೈರವನ ಕೋಟೆಯದ್ದಾಗಿದ್ದು, ಇದು ಅರಮನೆಯ ಆವರಣವನ್ನು ಒಳಗೊಂಡಿದೆ. ಈ ಕೋಟೆಯ ದ್ವಾರವನ್ನು ಶೃಂಗಾರದ ಬಾಗಿಲು ಎಂದು ಕರೆಯುತ್ತಾರೆ. ದ್ವಾರದ ಎರಡೂ ಬದಿಯಲ್ಲಿ ಭೈರವನ ಮೂರ್ತಿಗಳಿವೆ. ಈ ಪ್ರವೇಶದ್ವಾರವನ್ನು ಪ್ರವೇಶಿಸಬೇಕಾದರೆ ಭೈರವನಷ್ಟು ಬಲಿಷ್ಠವಾದ ಪಡೆಯನ್ನು ಎದುರಿಸಬೇಕು ಎಂಬುದನ್ನು ಸೂಚಿಸುತ್ತದೆ. ಜೊತೆಗೆ ಶತ್ರುವಿನ ಕಣ್ಣು ತಪ್ಪಿಸಲು ಅನೇಕ ತಿರುವುಗಳಿಂದ ಕೂಡಿದೆ. ಈ ಸುತ್ತಿನಲ್ಲಿ ಮಣ್ಣಿನಿಂದ ಮಾಡಿದ ಅರಮನೆಯ ಬಾಗಿಲು ಕಮಾನಿನಂತೆ ಇದೆ. ಒಳಭಾಗದಲ್ಲಿರುವ ಬೃಹತ್ ಹೆಬ್ಬಂಡೆಯಲ್ಲಿ ಗೂಡುಗಳನ್ನು ಕೊರೆದು ಕುಳಿತುಕೊಳ್ಳಲು ಅನುಕಾಲ ಮಾಡಿಕೊಂಡಂತಿದೆ. ಇದರ ಬಲಬದಿಯಲ್ಲಿ ಅರ್ಧಚಂದ್ರಾಕಾರದ ಬಾವಿಯಿದ್ದು ಎರಡೂ ಬದಿಯ ಕಂಬಗಳಲ್ಲಿ ನಂದಿ ಶಿಲ್ಪಗಳಿವೆ. ಮುಂಭಾಗದಲ್ಲಿ ಗಾರೆ ಮತ್ತು ಇಟ್ಟಿಗೆಯಿಂದ ಮಾಡಿದ ಗೋಳಾಕಾರದ ಕಟ್ಟಡವಿದೆ. ಇದನ್ನು ಸ್ಥಳೀಯರು ಮಾರಮ್ಮ ದೇವಾಲಯವೆಂದು ಕರೆಯುತ್ತಾರೆ. ಆದರೆ ಇದನ್ನು ನೋಡಿದಾಗ ಇದು ಗುಪ್ತವಾಗಿ ರಾಜನ ಸಭೆಯನ್ನು ಕರೆಯಲು ಅಥವಾ ರಹಸ್ಯ ಮಾತುಕತೆ ನಡೆಸಲು ಬಳಸುತ್ತಿದ್ದರು ಎಂದು ಊಹಿಸಬಹುದು. ಅರಮನೆಯ ಪಶ್ಚಿಮಕ್ಕೆ ರಾಣಿಯರ ಈಜುಕೊಳ ಹಾಗೂ ಎತ್ತರದ ವೇದಿಕೆಯ ಮೇಲೆ ಸ್ನಾನಗೃಹವಿದೆ. ಈಜುಕೊಳದ ಆಗ್ನೇಯ ದಿಕ್ಕಿಗೆ ಬಾಬಯ್ಯನ ದರ್ಗಾದ ತಳಪಾಯವಿದೆ. ನಾಗೇಶ್ವರ ಮತ್ತು ಈಶ್ವರ ದೇವಾಲಯಗಳು ಹೊಯ್ಸಳ ಮತ್ತು ಚಾಳುಕ್ಯ ಶೈಲಿಯಲ್ಲಿವೆ. ನಾಗೇಶ್ವರ ದೇವಾಲಯದ ಶಿಖರವು ಶಾಲಾ ಮಾದರಿಯಲ್ಲಿದ್ದು, ಹಂಪಿಯಲ್ಲಿರುವ ಅನಂತಶಯನ ದೇವಾಲಯ ಶಿಖರದೋಪಾದಿಯಲ್ಲಿದೆ. ಪೂರ್ವ ಮತ್ತು ಉತ್ತರ ದಿಕ್ಕಿಗೆ ಎರಡು ಗರ್ಭಗೃಹಗಳನ್ನು ಹೊಂದಿದೆ. ಕಂಬಗಳು ಕುಸುರಿ ಕೆತ್ತನೆಯಿಂದ ಅಲಂಕಾರಗೊಂಡಿವೆ. ದೇವಾಲಯದ ಮುಂಭಾಗ ಶಿಲೆ ಮತ್ತು ಗಾರೆಯಿಂದ ನಿರ್ಮಿಸಿದ

ಮಾರ್ಗವಿದೆ. ಇದನ್ನು ತುರ್ತು ಸಮಯದಲ್ಲಿ ಅರಸನು ಬಳಸುತ್ತಿದ್ದ ಹಾಗೂ ಮಳೆಗಾಲದಲ್ಲಿ ಮಳೆಯ ನೀರನ್ನು ಈ ಗುಪ್ತಮಾರ್ಗದ ಮೂಲಕ ಆನೆಯ ಹೊಂಡಕ್ಕೆ ಬಿಡುತ್ತಿದ್ದರು. ಈ ಆನೆಯ ಹೊಂಡದ ಒಂದು ಬದಿಯಲ್ಲಿ ಕೋಟೆಯ ಗೋಡೆ ಹಾದುಹೋಗಿರುವುದರಿಂದ ಕಂದಕವಾಗಿಯೂ ಬಳಕೆಯಾಗುತ್ತಿತ್ತು ಜೊತೆಗೆ ದೈನಂದಿನ ಬಳಕೆಗಾಗಿಯೂ ಇದರಲ್ಲಿರುವ ನೀರನ್ನು ಬಳಸಬಹುದಿತ್ತು. ಅರಮನೆಯ ಪಶ್ಚಿಮ ದಿಕ್ಕಿಗೆ ಆಯಾತಾಕಾರದ ಧಾನ್ಯ ಸಂಗ್ರಹಣ ಉಗ್ರಾಣವಿದೆ. ಒಳಭಾಗದಲ್ಲಿ ಗಾರೆಯಿಂದ ನಿರ್ಮಿಸಿದ್ದಾರೆ.

ನಾಲ್ಕನೇ ಸುತ್ತು ನೆಲಗೋಟೆಯಾಗಿದ್ದು, ಅರಮನೆಯ ಮೇಲ್ಭಾಗದಲ್ಲಿ ಬೆಟ್ಟವನ್ನು ಹತ್ತುವ ಭಾಗದಲ್ಲಿದೆ. ಈ ಕೋಟೆಯ ಪೂರ್ವಭಾಗದಲ್ಲಿ ಮಾಟನೂರು ಅಥವಾ ಪೆನುಗೊಂಡೆ ಎಂಬ ಊರಬಾಗಿಲು, ಅದರ ಎರಡೂ ಬದಿಗಳಲ್ಲೂ ಸುಮಾರು ೧೬ ಅಡಿ ಎತ್ತರದ ಕೊತ್ತಲುಗಳ ಮಧ್ಯೆ ಚಿಕ್ಕ ಓಣಿಯಂತೆ ಇದೆ. ದ್ವಾರದಲ್ಲಿ ಲಕ್ಷ್ಮಣೇಶ್ವರ ದೇವಾಲಯ ಹಾಗೂ ಮುಂಭಾಗ ಒಂದು ಶಾಸನವಿದೆ. ನಾಲ್ಕನೇ ಸುತ್ತಿನಿಂದ ಮೇಲೆ ಹೋಗಲು ನಿಡಿದಾದ ಬಂಡೆಯಲ್ಲಿ ಮೆಟ್ಟಿಲನ್ನು ಕೊರೆದಿದ್ದಾರೆ. ಐದನೇ ಸುತ್ತಿನಲ್ಲಿ ದ್ವಾರದ ಎರಡು ಬದಿಯಲ್ಲಿ ತೆರೆದ ಮಂಟಪಗಳಿವೆ. ಈ ಸುತ್ತನ್ನು ಅರಕೋಟೆ ಎಂದು ಕರೆಯುತ್ತಾರೆ. ಈ ಸುತ್ತಿನ ಕೆಳಭಾಗದಲ್ಲಿ ಕಲ್ಲಿನ ದೊಡ್ಡ ಕೊರಕಲಿನಲ್ಲಿ ಎರಡು ಗುಹೆಗಳನ್ನು ಕಟ್ಟಿದ್ದಾರೆ. ಆರನೇ ಸುತ್ತಿನಲ್ಲಿ ದ್ವಾರದ ಎರಡೂ ಕಡೆ ಸುಮಾರು ೮ ಅಡಿ ಎತ್ತರದ ಪೀಠಗಳು ಮತ್ತು ಅದರ ಪಕ್ಕದಲ್ಲಿ ತೆರೆದ ಮಂಟಪಗಳಿವೆ. ಈ ಸುತ್ತಿನ ಕೋಟೆಯನ್ನು ಚೆನ್ನರಾಯನ ಕೋಟೆ ಎನ್ನುವರು.

ಏಳನೇ ಸುತ್ತು ಕಾಳಹಸ್ತೇಶ್ವರ ಕೋಟೆಯಾಗಿದೆ. ವಿಶಾಲವಾದ ಅಂಗಳದಲ್ಲಿ, ಹಲವು ಕಟ್ಟಡದ ಅವಶೇಷಗಳಿವೆ. ಈ ಕೋಟೆಗೆ ಪೂರ್ವ ಮತ್ತು ದಕ್ಷಿಣಕ್ಕೆ ಎರಡು ಕೋಟೆಯ ದ್ವಾರಗಳಿವೆ. ದಕ್ಷಿಣ ದ್ವಾರದ ಮುಂಭಾಗ ಎರಡು ಗುಹೆಗಳಿದ್ದು, ಅಯ್ಯಗಳು ಕುಳಿತುಕೊಳ್ಳಲು ವಿಶಾಲವಾದ ಜಗತಿಗಳಿವೆ. ಪೂರ್ವದ್ವಾರದ ವಾಯುವ್ಯ ದಿಕ್ಕಿನಲ್ಲಿ ಚೌಕಾಕಾರದ ಕೊತ್ತಲದ ಮೇಲೆ ಎರಡು ಫಿರಂಗಿಗಳಿವೆ. ಇವು ೧೮ ಅಡಿ ಉದ್ದ ಒಂದು ಅಂಗುಲ ವ್ಯಾಸ ಮತ್ತು ೮ ಅಡಿ ಉದ್ದ ಒಂದು ಅಂಗುಲ ವ್ಯಾಸ ಹೊಂದಿದೆ. ಶ್ರೀರಾಮನಿಂದ ಲಿಂಗ ಪ್ರತಿಷ್ಠಾಪನೆಯಾಯಿತೆಂದು ಹೇಳುವ ಕಾಳಹಸ್ತೇಶ್ವರ ದೇವಾಲಯವಿದೆ. ಈ ದೇವಾಲಯದ ಮಹಾಮಂಟಪದಲ್ಲಿ ಗಣಪತಿ ಮತ್ತು ನಾಗಣಿಯ ಮೂರ್ತಿಗಳಿವೆ. ಕಂಬಗಳಲ್ಲಿ ನಂದಿ, ಕಾಮಧೇನು, ಹೂಬಳ್ಳಿ, ಮೊದಲಾದ ಉಬ್ಬುಶಿಲ್ಪಗಳಿವೆ. ಈ ದೇವಾಲಯದ ಪೂರ್ವಕ್ಕಿರುವ ಕಾಳಹಸ್ತೇಶ್ವರ ದೊಣೆಯನ್ನು ಗಾರೆ ಮತ್ತು ಇಟ್ಟಿಗೆಯಿಂದ ನಿರ್ಮಾಣ ಮಾಡಲಾಗಿದೆ. ವಸಂತ ಕಾಲದಲ್ಲಿ ರಾಣಿಯರಿಗಾಗಿ ಇರಲು ಅರಮನೆಯನ್ನು ನಿರ್ಮಿಸಲಾಗಿದೆ. ಇದರ ಬಲಬದಿಯಲ್ಲಿ ಗರಡಿಮನೆ ಎಡಬದಿಯಲ್ಲಿ ತುಪ್ಪದ ಕೊಳಗಳು ಹಾಗೂ ಚೌಕಾಕಾರದ ಕಟ್ಟಡಗಳಿವೆ. ಕಾಳಹಸ್ತೇಶ್ವರ

ದೇವಾಲಯದ ಉತ್ತರ ದಿಕ್ಕಿಗೆ ನಿಡಿದಾದ ಕಲ್ಲಿನ ಮೇಲೆ ಶಿಖರ ಬಸವಣ್ಣ ದೇವಾಲಯವಿದೆ. ಇದರ ಮುಂದೆ ಬಂಡೆಯಲ್ಲಿ ಎರಡು ಶಾಸನಗಳಿವೆ.

ಕೋಟೆಯ ಭಿತ್ತಿಯ ಮೇಲೆ ಸಿಂಹ, ಆನೆ, ಹುಲಿ, ಕೂರ್ಮ, ವೃಶ್ಚಿಕ, ಸ್ತ್ರೀಪುರುಷರ, ಯುದ್ಧಕ್ಕೆ ರಥದೊಂದಿಗೆ ಹೊರಡುವ ಸೈನಿಕರ ಶಿಲ್ಪ, ವಿವಿಧ ಮಿಥುನ ಶಿಲ್ಪಗಳನ್ನು ಕೆತ್ತಿದ್ದಾರೆ. ಕೋಟೆಯ ಹೊರಭಾಗದಲ್ಲಿ ರಾಮಲಿಂಗೇಶ್ವರ, ರಾಮದೇವಾಲಯ, ಗಣಪತಿ, ಆಂಜನೇಯ, ಈಶ್ವರ, ಸಾರಟೇಶ್ವರ ಮೊದಲಾದ ದೇವಾಲಯ, ಶೂಲದೀರಣ್ಣ ಶಿಲ್ಪ, ರಾಮ ಮತ್ತು ಲಕ್ಷ್ಮಣ ತೀರ್ಥಗಳು ವೀರಗಲ್ಲು, ಮಹಾಸತಿಗಲ್ಲು, ಮೊದಲಾದ ಅವಶೇಷಗಳಿವೆ.

### ೪.೨. ನಿಡುಗಲ್ಲು ಕೋಟೆಯ ಬಗ್ಗೆ ಸಾಹಿತ್ಯದಲ್ಲಿ ವರ್ಣನೆ:

ನಿಡುಗಲ್ಲು ಕೋಟೆಯನ್ನು ಹಲವು ಶಾಸನಗಳು, ಜನಪದ ಸಾಹಿತ್ಯದಲ್ಲಿ ಸಾಕಷ್ಟು ವರ್ಣಿಸಿವೆ. ನಿಡುಗಲ್ಲು ಶಾಸನಗಳಲ್ಲಿ ಕೋಟೆಯನ್ನು ಈ ರೀತಿ ವರ್ಣಿಸಿವೆ.

ಕಾಳಾಂಜನ ವೆಂಬುದಿರುಂ
ಗೋಳನ ಗಿರಿದುರ್ಗ್ಗವನ್ತದ ಭ್ರಂಕಾಷತಾ
ಭೀಳತರ ಚೋಳವದರು
ತ್ತಾಳಿತೆಯನೆ ನೋಡಿ ಧಾತ್ರಿ ನಿಡುಗಲ್ಲೆನ್ನುಂ...... [೧೪]

ಜಗದೀಶ ನಿರುಂಗೊಳಂ
ಸೋಗಯಿಸಿ ತಾನಿರ್ಪ ದುರ್ಗದಂಕಿತವದುಂ
ನೆಗೆದು ಗಿರಿಶಿಖರದುಚ್ಚಂ
ಮುಗಿಲಂ ಮುಟ್ಟಿದೊಡೆ ಪೊಡವಿನಿಡುಗಲ್ಲೆಂಗುಂ.......[೧೫]

ನಿಡುಗಲ್ಲು ಕೋಟೆಯನ್ನು ಜನಪದ ಸಾಹಿತ್ಯದಲ್ಲಿ ಈ ರೀತಿ ವರ್ಣಿಸಿದ್ದಾರೆ.

ಹಕ್ಕಿ ಹಾರದ ಕೋಟೆ ಪಕ್ಷಿತೂರದ ಕೋಟೆ
ರಕ್ಕಸನಕೋಟೆ ರಣಕೋಟೆ ॥ರನ್ನಾದ॥
ರಕ್ಕಸನ ಕೋಟೆ ರಣಕೋಟೆ ನಿಡುಗಲ್ಲು
ಒಕ್ಕು ಹೋಗೋನ ಹೆಸರೇನೆ ॥ರನ್ನಾದ॥
ಕಾಗೆ ತೂರದ ಕೋಟೆ ಗೂಬೆ ತೂರದ ಕೋಟೆ
ರಾವಳನ ಕೋಟೆ ರಣಕೋಟೆ ॥ರನ್ನಾದ॥
ರಾವಳನ ಕೋಟೆ ರಣಕೋಟೆ ನಿಡುಗಲ್ಲು

ಓದಿ ಹೇಳೋನ ಹೆಸರೇನೆ ॥ರನ್ನಾದ॥
ಕೋಟೆ ಆರಾಳುದ್ದ ಕೊತ್ತಲ ಮುರಾಳುದ್ದ
ಕೋಟೆ ಹೆಸರೆ ಗಡಿಯಂಕ ॥ರನ್ನಾದ॥

ನಿಡುಗಲ್ಲಿನ ಚನ್ನಪ್ಪ ಕವಿಯು ನಿಡುಗಲ್ಲು ದುರ್ಗಾಷ್ಟಕ ಎನ್ನುವ ಪದ್ಯದಲ್ಲಿ ನಿಡುಗಲ್ಲು ದುರ್ಗವನ್ನು ಈ ರೀತಿ ವರ್ಣಿಸಿದ್ದಾರೆ.

ಪೇಳ್ವಪರಿಂದರಿದು ಮುಂಜಗದಿ ಕವಿಜನಿಕರ
ಕಾಳಾಂಜನಾದ್ರಿಯೆನಿಸುವ ದುರ್ಗದಿರವ
ಬಾಳಲೋಚನನಿರುವ ಕನಕರಾಚಿತ ಶೈಲ
ದೇಳಿಗೆಗೆಯೆಣೆಯನಿಸಿಯೆಸೆದಿಹುದು ಸತತಂ ॥ಪಲ್ಲ॥
ಸುತ್ತಲೊಪ್ಪುವ ಫಿರಂಗಿಗಳ ಕೊತ್ತಳದಿಂದೆ
ಮುತ್ತಿ ಕಾಯ್ದಿರ್ಪ ಪಟುಭಟರವದಿಂದೆ
ಗೊತ್ತುಗೊತ್ತಿನಲಿರ್ಪ ದೊಣೆಗಳಾದಕಗಳಿಂದೆ
ಸುತ್ತ ನೋಡಿದಡೆ ಜಲಮಯದಿ ಮೆಱೆದಿಹುದು ॥[೧೬]

ನಿಡುಗಲ್ಲು ನಾಯಕರ ಅರಸ ಚಿಕ್ಕತಿಪ್ಪರಾಜೇಂದ್ರನ ಶಾಸನದಲ್ಲಿ ನಿಡುಗಲ್ಲನ್ನು ಈ ರೀತಿ ವರ್ಣಿಸಿದೆ.

'ದುರ್ಘಟವೀ ಕರ್ನಾಟಕ ದುರ್ಗಂಗಳಿಗಧಿಕವೆನಿಪ್ಪ ನಿಡುಗಲ್ಲೆಂಬೀ ದುರ್ಗ" ಹೀಗೆ ನಿಡುಗಲ್ಲು ದುರ್ಗವನ್ನು ಶಾಸನಗಳಲ್ಲಿ, ಜನಪದ ಸಾಹಿತ್ಯದಲ್ಲಿ ಹಾಡಿ ಹೊಗಳಿದೆ.

೨. ದೇವರಬೆಟ್ಟ:

ನಿಡುಗಲ್ಲಿನ ಆಗ್ನೇಯ ದಿಕ್ಕಿಗೆ ಪಾವಗಡ ತಾಲ್ಲೂಕು ಕೇಂದ್ರದಿಂದ ೧೦ ಕಿ.ಮೀ. ದೂರದಲ್ಲಿ ದೇವರ ಬೆಟ್ಟವಿದೆ. ಈ ಬೆಟ್ಟ ಬೋರಲಾಕಿರುವ ತೆಂಗಿನಕಾಯಿ ಚಿಪ್ಪಿನಂತಿದ್ದು, ಅಲ್ಲಿ ರಂಗನಾಥಸ್ವಾಮಿ ದೇವಾಲಯವಿರುವುದರಿಂದ ದೇವರಬೆಟ್ಟ ಎಂದು ಕರೆಯುತ್ತಾರೆ. ಈ ಪ್ರದೇಶದ ರಾಜಕೀಯ ಇತಿಹಾಸ ತಿಳಿಯಲು ಆಧಾರಗಳು ದೊರೆಯದ ಕಾರಣ ಸ್ಥಳೀಯರಿಂದ ಮಾಹಿತಿ ಪಡೆದು ಚರ್ಚಿಸಲಾಗಿದೆ. ದೇವರ ಬೆಟ್ಟದಲ್ಲಿ ಮೊದಲ ಬಾರಿಗೆ ಕೋಟೆ-ಕೊತ್ತಲುಗಳ ನಿರ್ಮಾಣ ಕಾರ್ಯ ನಿಡುಗಲ್ಲು ಚೋಳರಿಂದ ಆರಂಭವಾಯಿತು. ರತ್ನಗಿರಿ ಪಾಳೆಯಗಾರರು ಈ ಪ್ರದೇಶದ ಮೇಲೆ ದಾಳಿ ಮಾಡಿ ಕೆಲವು ಕಾಲ ತಮ್ಮ ಅಧೀನದಲ್ಲಿ ಇಟ್ಟುಕೊಂಡಿದ್ದರು.[೧೭] ಇದನ್ನು ಸಹಿಸದ ನಿಡುಗಲ್ಲಿನಲ್ಲಿ ಅಧಿಕಾರವಹಿಸಿಕೊಂಡ ನಿಡುಗಲ್ಲು ನಾಯಕರು ಈ ಪ್ರದೇಶವನ್ನು ನಮಗೆ ಸೇರಬೇಕೆಂದು ತೀರ್ಮಾನಿಸಿ ಕ್ಯಾತಗಾನಹಳ್ಳಿಯ ಲಿಂಗಣ್ಣ ಮತ್ತು ಕರಿಯಣ್ಣರಿಗೆ ಈ

ಪ್ರದೇಶ ವಶಪಡಿಸಿಕೊಳ್ಳಲು ವಹಿಸಿದನು. ಇವರು ದಾಳಿ ಮಾಡುವ ಕಾಲಕ್ಕೆ ದೇವರಬೆಟ್ಟ ಏಳುಸುತ್ತಿನ ಕೋಟೆಯಿಂದ ಅಭೇದ್ಯವಾಗಿತ್ತು. ಇದನ್ನು ಗಮನಿಸಿದ ಲಿಂಗಣ್ಣ, ಕರಿಯಣ್ಣ ದೇವರಬೆಟ್ಟದ ಹೆಣ್ಣುಮಗಳು ಹೊಲದಲ್ಲಿ ಹುಲ್ಲು ಕೀಳುತ್ತಿರುವುದನ್ನು ಕಂಡು ಆಕೆಯ ಬಳಿ ಬಂದು ಲಿಂಗಣ್ಣ ನನ್ನನ್ನು ಈ ಹುಲ್ಲಿನ ಹೊರೆಯಲ್ಲಿ ಹೊತ್ತುಕೊಂಡು ಕೋಟೆಯ ಒಳಗೆ ಕರೆದೊಯ್ದರೆ ನಿನಗೆ ಬೇಕಾದಷ್ಟು ಸಂಪತ್ತನ್ನು ನೀಡುವೆ ಎಂದು ಆಸೆ ತೋರಿಸಿ ಕೋಟೆಯ ಒಳಗೆ ಹೋದನು. ರಾತ್ರಿಯಾದ ನಂತರ ಸೈನಿಕರು ಊಟ ಮಾಡುವ ಅಡಿಗೆಗೆ ಮತ್ತುಬರುವ ಪದಾರ್ಥವನ್ನು ಹಾಕಿ ಅವರಿಗೆ ಮತ್ತು ಬರುವಂತೆ ಮಾಡಿ ಕೋಟೆಯ ಬಾಗಿಲನ್ನು ತೆರೆದು ನಿಡುಗಲ್ಲು ಸೈನ್ಯದೊಂದಿಗೆ ಒಳನುಗ್ಗಿ ಸೈನಿಕರನ್ನೆಲ್ಲಾ ಕೊಲೆ ಮಾಡಿ ನಿಡುಗಲ್ಲು ಧ್ವಜವನ್ನು ಹಾರಿಸಿದನು. ಇದನ್ನು ತಿಳಿದ ದೇವರಬೆಟ್ಟದ ಸೈನಿಕರ ಪತ್ನಿಯರೆಲ್ಲಾ ಸಾಮೂಹಿಕವಾಗಿ ಆತ್ಮಹತ್ಯೆಮಾಡಿಕೊಂಡರು. ಅನಂತರ ನಿಡುಗಲ್ಲು ಪಾಳೆಯಗಾರರು ಈ ಕೋಟೆಯನ್ನು ಕರಿಯಣ್ಣನ ಉಸ್ತುವಾರಿಕೆಗೆ ಬಿಟ್ಟರು. ಹೈದರ್-ಟಿಪ್ಪು ನಿಡುಗಲ್ಲಿಗೆ ಮುತ್ತಿಗೆ ಹಾಕಿದಾಗ ಈ ಕೋಟೆಯು ಸಹ ಅವರ ದಾಳಿಗೆ ಒಳಗಾಗಿ ಹಾಳಾಯಿತು. ಇವರ ನಂತರ ದೇವರಬೆಟ್ಟ ಮೈಸೂರು ಒಡೆಯರ ಆಳ್ವಿಕೆ ಒಳಪಟ್ಟಿತ್ತು.

### ೨.೧. ದೇವರಬೆಟ್ಟ ಕೋಟೆಯ ಲಕ್ಷಣಗಳು:

ದೇವರ ಬೆಟ್ಟದ ಕೋಟೆಯು ಏಳುಸುತ್ತಿನಿಂದ ಕೂಡಿದ್ದು, ಪ್ರತಿಯೊಂದು ಸುತ್ತು ಮತ್ತೊಂದು ಸುತ್ತಿನ ತುದಿಗೆ ಎರಡೂ ಬದಿಗಳಲ್ಲಿ ಸಂದಿಸಿವೆ. ಕೋಟೆಯ ನಿರ್ಮಾಣಕ್ಕೆ ಒರಟು ಕಲ್ಲು ಮತ್ತು ಚಿಕ್ಕ ಚಿಕ್ಕ ಸೈಜುಕಲ್ಲುಗಳನ್ನು ಬಳಸಿಕೊಂಡಿದ್ದಾರೆ. ಈ ಕೋಟೆಯ ಸುತ್ತಲೂ ಆಳವಾದ ಕಂದಕವಿತ್ತೆಂದು ಸ್ಥಳೀಯರು ಹೇಳುತ್ತಾರೆ. ಊರನ್ನು ಸುತ್ತುವರದಿರುವ ಮೊದಲನೇ ಸುತ್ತಿಗೆ ಪೂರ್ವದ ಭಾಗದಲ್ಲಿ ದ್ವಾರಬಾಗಿಲಿದೆ. ಇಲ್ಲಿಂದ ಉತ್ತರಕ್ಕೆ ಎರಡನೇ ಸುತ್ತಿನ ಕೋಟೆಯ ದ್ವಾರಬಾಗಿಲಿದ್ದು, ಇದರ ಎರಡು ಬದಿಗಳಲ್ಲೂ ಕೊತ್ತಲಗಳಿವೆ. ಮೂರನೇ ಸುತ್ತಿನಲ್ಲಿ ಎರಡು ದ್ವಾರಗಳಿವೆ. ಒಂದು ದಕ್ಷಿಣಕ್ಕೆ ಮತ್ತೊಂದು ಪೂರ್ವಕ್ಕಿರುವ ನಿಡುಗಲ್ಲು ಊರಬಾಗಿಲುಗಳಾಗಿವೆ. ಈ ಚಿಕ್ಕ ದ್ವಾರಗಳನ್ನು ಒರಟು ಕಲ್ಲಿನಿಂದ ಕಟ್ಟಲಾಗಿದೆ. ಈ ದ್ವಾರಗಳ ಉತ್ತರ ಮತ್ತು ಪೂರ್ವಕ್ಕೆ ಬುರುಜುಗಳಿವೆ. ನಾಲ್ಕನೇ ಸುತ್ತು ದೇವಾಲಯದ ರಕ್ಷಣೆಗಾಗಿಯೇ ನಿರ್ಮಾಣವಾಗಿದೆ. ಇದರ ದ್ವಾರಗಳು ತುಂಬಾ ಚಿಕ್ಕದಾಗಿವೆ. ಸುಮಾರು ೧೫ ಅಡಿಗಳಷ್ಟು ಎತ್ತರವಿರುವ ಕೋಟೆಯ ಗೋಡೆಯ ಅಗಲ ತುಂಬಾ ಕಡಿಮೆ ಇದೆ.

ಪೂರ್ವಾಭಿಮುಖವಾಗಿರುವ ರಂಗನಾಥಸ್ವಾಮಿ ದೇವಾಲಯ ತ್ರಿಕೂಟ ಮಾದರಿಯಲ್ಲಿದೆ. ಮೂಲ ಗರ್ಭಗುಡಿಯಲ್ಲಿ ರಂಗನಾಥಸ್ವಾಮಿ, ಪೂರ್ವದ ಗರ್ಭಗುಡಿಯಲ್ಲಿ ಲಕ್ಷ್ಮೀ, ದಕ್ಷಿಣದ

ಗರ್ಭಗುಡಿಯಲ್ಲಿ ಮಣ್ಣಿನ ಗರುಡ ದೇವರ ವಿಗ್ರಹ ಹಾಗೂ ಮಹಾಮಂಟಪದಲ್ಲಿ ಆಳ್ವಾರರ ಶಿಲ್ಪಗಳಿವೆ. ಈ ದೇವಾಲಯ ಚೋಳರ ವಾಸ್ತುಶೈಲಿಯಲ್ಲಿ ನಿರ್ಮಾಣವಾಗಿದ್ದು, ಶಿಖರ ಭಾಗ ಗಾರೆಯಿಂದ ಅಲಂಕರಿಸಿದ ಶಿಖರದಲ್ಲಿ ದೇವಕೋಷ್ಟಕಗಳಿವೆ. ದೇವಾಲಯದ ಬಲಭಾಗದಲ್ಲಿ ಆಂಜನೇಯ ಅದರ ಮುಂಭಾಗ ಗರುಡಗಂಭ, ಎಡಭಾಗದಲ್ಲಿ ಎಂಟು ಕಂಬಗಳಿರುವ ತೆರೆದ ಮಂಟಪವಿದ್ದು ಬಹುಶಃ ಇದನ್ನು ದೇವಾಲಯಕ್ಕೆ ಬಂದವರು ವಿಶ್ರಾಂತಿ ಪಡೆಯುವುದಕ್ಕಾಗಿ ನಿರ್ಮಿಸಿರುವ ಕಟ್ಟಡವಾಗಿದೆ ಎಂದು ಹೇಳಬಹುದು.

ಚೌಕಾಕಾರದ ಕೊತ್ತಲಗಳನ್ನು ಒಳಗೊಂಡಿರುವ ಐದನೇ ಸುತ್ತಿನ ಕೋಟೆ ಗೋಡೆಯನ್ನು ಒರಟು ಕಲ್ಲುಗಳಿಂದ ಕಟ್ಟಲಾಗಿದೆ. ಪಶ್ಚಿಮ ದಿಕ್ಕಿನಲ್ಲಿರುವ ಅಕ್ಕಮ್ಮಗಾರ್ಲು ದೊಣೆಗೆ ದ್ವಾರವಿದೆ. ಆನೆಲಾಯಗಳು ಮತ್ತು ವಸತಿಕಟ್ಟಡಗಳು ಈ ಸುತ್ತಿನಲ್ಲಿವೆ. ಆರನೇ ಸುತ್ತಿಗೆ ಹೋಗಲು ನಿಡಿದಾದಗಲ್ಲನ್ನು ಕೊರೆದು ಮೆಟ್ಟಿಲನ್ನು ಮಾಡಲಾಗಿದೆ. ಪೂರ್ವದ ದ್ವಾರಬಾಗಿಲು ಹಾಳಾಗಿದೆ. ಈ ಸುತ್ತು ಆಯತಾಕಾರವಾಗಿದ್ದು ಹಲವು ಚೌಕಾಕಾರದ ಕೊತ್ತಲುಗಳಿಂದ ಕೂಡಿದೆ. ಪಶ್ಚಿಮದಲ್ಲೂ ಒಂದು ದ್ವಾರ ಮತ್ತು ತೆರೆದ ಮಂಟಪಗಳಿವೆ. ದಕ್ಷಿಣ ದಿಕ್ಕಿನಲ್ಲಿ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಿದ ಒಂದು ದೊಣೆಯಿದೆ.

ಬೆಟ್ಟದ ತುದಿಯ ಭಾಗವಾಗಿದಲ್ಲಿರುವ ಏಳನೇ ಸುತ್ತಿನ ಗೋಡೆ ಸಣ್ಣ ಸಣ್ಣ ಸೈಜು ಕಲ್ಲು ಮತ್ತು ಮಣ್ಣಿನಿಂದ ನಿರ್ಮಾಣವಾಗಿದೆ. ೧೫ ಅಡಿ ಎತ್ತರವಾಗಿದೆ. ಗೋಡೆಯ ಸುತ್ತಲೂ ಬಂದೂಕು ಕಿಂಡಿಗಳನ್ನು ಬಿಡಲಾಗಿದೆ. ಇದರ ಒಳಗೆ ಅರಮನೆಯ ತಳಪಾಯ ಮತ್ತು ಹಲವು ಕಟ್ಟಡಗಳ ಅವಶೇಷಗಳಿವೆ. ಎತ್ತರದ ಜಗತಿಯಲ್ಲಿ ನಾಲ್ಕು ಕಂಬಗಳ ಮೇಲೆ ಗಾಳಿಗೋಪುರವನ್ನು ನಿರ್ಮಿಸಿದ್ದಾರೆ. ಇದರ ಮುಂದೆ ಗರುಡಗಂಭವಿದೆ.

**೩. ಯಲ್ಲಪ್ಪನಾಯಕನ ಹೊಸಕೋಟೆ (ವೈ.ಎನ್.ಹೊಸಕೋಟೆ)**

ಯಲ್ಲಪ್ಪನಾಯಕನ ಹೊಸಕೋಟೆಯ ಬೆಟ್ಟವು ಏಕಶಿಲೆಯಿಂದ ಕೂಡಿದ್ದು, ನಿಡುಗಲ್ಲಿನ ಉತ್ತರ ದಿಕ್ಕಿಗೆ ಇದೆ. ಪಾವಗಡ ತಾಲ್ಲೂಕು ಕೇಂದ್ರದಿಂದ ೨೨ ಕಿ.ಮೀಟರ್ ದೂರದಲ್ಲಿದೆ. ಕ್ರಿ.ಶ. ೧೬೫೦ರಲ್ಲಿ ಯಲ್ಲಪ್ಪನಾಯಕನ ತಂದೆ ರಾಜಾಕಸ್ತೂರಿಬೊಬ್ಬಳಿ ತಿಮ್ಮನಾಯಕ ಕುಂದುರ್ಪಿಯಿಂದ ಈ ಪ್ರದೇಶವನ್ನು ಆಳುತ್ತಿದ್ದನು. ಈತ ಹರತಿ ತಿಪ್ಪರಾಜನ ವಂಶದವನಾಗಿದ್ದನು. ಬಿಜಾಪುರದ ಆದಿಲ್ ಷಾಹಿಯ ಸೇನಾನಿ ರಣದುಲ್ಲಾಖಾನನು ಮೋಸದಿಂದ ತಿಮ್ಮನಾಯಕನನ್ನು ಕೊಂದನು. ಈತನ ಮಗ ಯಲ್ಲಪ್ಪನಾಯಕ ಆಗಿನ್ನೂ ೫ ವರ್ಷದ ಹುಡುಗನಾಗಿದ್ದು, ಪಟ್ಟಣ್ಣಶೆಟ್ಟಿಯ ಆಶ್ರಯದಲ್ಲಿ ಬೆಳೆಯುತ್ತಿದ್ದನು. ಈತ ಯಲ್ಲಪ್ಪನಾಯಕನನ್ನು ಗುರುತಿಸಲು ಸಾಧ್ಯವಾಗದ ರೀತಿಯಲ್ಲಿ ಲಿಂಗಾಯುತ ಹುಡುಗನಂತೆ ಸಿದ್ಧಗೊಳಿಸಿ, ತಿಮ್ಮನಾಯಕನ

ಸೋದರಿಯಾಗಿದ್ದ ಪದುಮಮ್ಮ ನಾಗತಿಯವರ ಬಳಿಗೆ ಕಳುಹಿಸಿ ಯುದ್ಧ ವಿದ್ಯೆಗಳನ್ನು ಕಲಿಸುತ್ತಿದ್ದನು. ಪೆನುಗೊಂಡೆಯಲ್ಲಿ ಅಧಿಕಾರ ಕಳೆದುಕೊಂಡಿದ್ದ ಪೆದ್ದಕೋನೇಟಿ ನಾಯಕ ಕುಂದುರ್ಪಿಗೆ ಬಂದು ಅಧಿಕಾರ ವಹಿಸಿಕೊಂಡನು. ಈ ಬದಲಾವಣೆ ಕೆಲವು ದಳವಾಯಿಗಳ ಅತೃಪ್ತಿಗೆ ಕಾರಣವಾಯಿತು. ಈ ಮಧ್ಯೆ ಯಲ್ಲಪ್ಪನಾಯಕ ರಾಯದುರ್ಗದಲ್ಲಿರುವ ವಿಷಯ ಇವರಿಗೆ ತಿಳಿದು ರಹಸ್ಯವಾಗಿ ಹಣವನ್ನು ಸಂಗ್ರಹಿಸಲು ಪ್ರಾರಂಭಿಸಿ ಯಲ್ಲಪ್ಪನಾಯಕನಿಗೆ ಮರಳಿ ಬರುವಂತೆ ಆಹ್ವಾನಿಸಿದರು. ಇದರಿಂದ ಹಲವು ಸಂಗಡಿಗರೊಂದಿಗೆ ಪಾಳ್ಳೆ ಎಂಬಲ್ಲಿಗೆ ಬಂದು ಬೇಟೆಗಾರರಂತೆ ಇದ್ದು ಸೈನ್ಯವನ್ನು ಜಮಾಯಿಸುತ್ತಿದ್ದನು.

ಒಮ್ಮೆ ಬೇಟೆಗಾಗಿ ಯಲ್ಲಪ್ಪನಾಯಕನ ಹಳ್ಳಿಗೆ ಹೋದಾಗ ಬಿಳಿಯ ಮೊಲವೊಂದು ತೋಳವನ್ನು ಅಟ್ಟಿಸಿಕೊಂಡು ಹೋಗುತ್ತಿತ್ತಂತೆ ಇದನ್ನು ನೋಡಿ ಇದು ಗಂಡು ಮೆಟ್ಟಿದ ವೀರಭೂಮಿ ಎಂದು ತಿಳಿದು ಒಂದು ಠಾಣ್ಯ ಮತ್ತು ಹಳ್ಳಿಯನ್ನು ಸ್ಥಾಪಿಸಿದನು. ಈ ಮಧ್ಯೆ ಪೆನುಗೊಂಡೆಯ ಹುಸೇನ್‌ಖಾನ್ ಬಳಿ ಯಲ್ಲಪ್ಪನಾಯಕ ಹೋಗಿ ಕುಂದುರ್ಪಿಯ ಮೂಲಪುರುಷ ತಾನೆಂದು ಆದ ಕಾರಣ ತನ್ನ ಸಂಸ್ಥಾನವನ್ನು ಕೊಡಿಸಬೇಕೆಂದು ಕೇಳಿಕೊಂಡನು. ಇದಕ್ಕೆ ಒಪ್ಪಿದ ಆತ ಹೊಸಕೋಟೆ, ಹೊಸದುರ್ಗ, ಇಂದ್ರಬೆಟ್ಟ, ಕಾಮನದುರ್ಗ, ನಾಗಲಾಪುರ, ಕಂಬದೂರು, ಪೇರೂರು, ತಿರುಮಣಿಗಳನ್ನು ಪಡೆದನು. ಹೀಗೆ ಪಡೆದ ಈ ಪ್ರಾಂತ್ಯಗಳನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಪಾಮುಲಬಂಡೆ ಎಂಬ ಬೆಟ್ಟದಲ್ಲಿ ಸಣ್ಣಲಿಂಗನಾಯಕ ಮತ್ತು ದೊಡ್ಡ ಲಿಂಗನಾಯಕರೆಂಬ ದಳವಾಯಿಗಳ ನೆರವಿನಿಂದ ನಾಲ್ಕು ಬಾಗಿಲುಗಳುಳ್ಳ ಬಲವಾದ ಕಲ್ಲುಕೋಟೆಯನ್ನು ಅನೇಕ ಮಂಟಪಗಳನ್ನು, ಧಾನ್ಯದ ಕಣಜ, ಮದ್ದಿನಕಣಜ, ದೇವಾಲಯಗಳನ್ನು ನಿರ್ಮಿಸಿದನು. ಅಲ್ಲದೆ ಸಿದ್ಧಪುರುಷರ ನೆನಪಿಗಾಗಿ ಸಿದ್ಧರ ಜಲಾಶಯವನ್ನು ನಿರ್ಮಿಸಿ ಚನ್ನಕೇಶವ ದೇವಾಲಯವನ್ನು ನವೀಕರಿಸಿದನು. ಹೊಸಕೋಟೆಯ ಗಡಿಭಾಗದಲ್ಲಿ ಚಿಕ್ಕ ಚಿಕ್ಕ ಸ್ಥಳ ದುರ್ಗಗಳನ್ನು, ಹೊಸದುರ್ಗ, ಇಂದ್ರಬೆಟ್ಟ, ಕಾಮನದುರ್ಗದಲ್ಲಿ ಹೊಸದಾದ ಕೋಟೆಗಳನ್ನು ಕಟ್ಟಿಸಿದನು. ನಂತರ ಹುಸೇನ್‌ಖಾನನ ಒತ್ತಡಕ್ಕೆ ಮಣಿದು ಕುಂದುರ್ಪಿ ಪಾಳೆಪಟ್ಟಿಗೆ ಕಂಬದೂರು, ಪೇರೂರು, ತಿರುಮಣಿಗಳನ್ನು ಬಿಟ್ಟುಕೊಟ್ಟನು. ಇವನ ನಂತರ ೧೬೭೦ರಲ್ಲಿ ಹಿರಿಯ ಬಡತಿಮ್ಮಣ್ಣನಾಯಕ ಹೈದರ್‌ನ ಸಾಮಂತನಾಗಿ ಮುಂದುವರೆಸಿದನು. ಇವನ ನಂತರ ರಾಮಪ್ಪನಾಯಕ ಚಿಕ್ಕ ಬಡತಿಮ್ಮಣ್ಣ ನಾಯಕ, ನಲ್ಲಜಲ್ಮನಾಯಕ, ರಾಮಪ್ಪನಾಯಕ ಮೊದಲಾದವರು ಆಳ್ವಿಕೆ ಮಾಡಿದರು. ಇದು ಚಿಕ್ಕಪಾಳೆಯ ಪಟ್ಟಾದರೂ ತಮ್ಮ ಘನತೆಯನ್ನು ಉಳಿಸಿಕೊಂಡು ಕೊನೆಯವರೆಗೂ ಪೆನುಗೊಂಡೆಯ ನವಾಬರಿಗೂ, ಹೈದರಾಲಿಖಾನನಿಗೂ ಕಪ್ಪವನ್ನು ಕೊಡುತ್ತಾ ಸ್ವತಂತ್ರ ಪಾಳೆಯಗಾರರಂತೆಯೇ ಬದುಕನ್ನು ನಡೆಸಿದ್ದಾರೆ.[೮]

## ೩.೧. ಯಲ್ಲಪ್ಪನಾಯಕನ ಹೊಸಕೋಟೆ ಲಕ್ಷಣಗಳು:

ಹೊಸಕೋಟೆಯಲ್ಲಿ ಉತ್ತರ ಮತ್ತು ದಕ್ಷಿಣಕ್ಕೆ ಚಿಕ್ಕಪಾಮುಲ ಮತ್ತು ದೊಡ್ಡ ಪಾಮುಲ ಎಂಬ ಬೆಟ್ಟಗಳಿದ್ದು ಮಧ್ಯಭಾಗದಲ್ಲಿ ಗ್ರಾಮವಿದೆ. ಈ ಗ್ರಾಮದ ಪೂರ್ವ, ಪಶ್ಚಿಮ ಮತ್ತು ದೊಡ್ಡಪಾಮುಲ ಬೆಟ್ಟದಲ್ಲಿ ಕೋಟೆಯನ್ನು ನಿರ್ಮಿಸಲಾಗಿದೆ. ಈ ಕೋಟೆ ನಿಡುಗಲ್ಲು ಊರಬಾಗಿಲು, ಪೆನುಗೊಂಡೆ ಊರಬಾಗಿಲು, ಸಂತೆಊರಬಾಗಿಲು ಎಂಬ ಮೂರು ದ್ವಾರಗಳನ್ನು ಹೊಂದಿದೆ. ಕೋಟೆಯ ಗೋಡೆಯನ್ನು ಮಧ್ಯಮ ಮತ್ತು ಚಿಕ್ಕ ಗಾತ್ರದ ಕಲ್ಲುಗಳಿಂದ ನಿರ್ಮಾಣ ಮಾಡಲಾಗಿದೆ. ಕಲ್ಲುಗಳ ಮಧ್ಯದಲ್ಲಿ ಮಣ್ಣನ್ನು ತುಂಬಿ ಗೋಡೆಯನ್ನು ವಿಶಾಲಗೊಳಿಸಲಾಗಿದೆ. ಇದು ಏಳುಸುತ್ತಿನ ಕೋಟೆಯಾಗಿದ್ದು, ಬಹುತೇಕ ನಾಶವಾಗಿದೆ. ಕೋಟೆಯಲ್ಲಿ ಬುರುಜುಗಳು ವೃತ್ತಾಕಾರ ಮತ್ತು ಚೌಕಾಕಾರ ಎರಡು ರೀತಿಯಲ್ಲೂ ನಿರ್ಮಾಣವಾಗಿದೆ. ಕೋಟೆಯ ಮೊದಲನೇ ದ್ವಾರದ ಎರಡು ಬದಿಗಳಲ್ಲಿ ತೆರೆದ ಮಂಟಪವಿದೆ. ಎರಡನೇ ದ್ವಾರದಲ್ಲಿ ಬಲಭಾಗದಲ್ಲಿ ಎರಡು ಕೊತ್ತಲಗಳಿದ್ದು, ಒಂದು ತೆರೆದ ಮಂಟಪವಿದೆ. ಈ ಕೊತ್ತಲುಗಳನ್ನು ಸ್ಥಳೀಯರು ಹತ್ತಿಕೋಟೆಯ ಕೊತ್ತಲು ಎನ್ನುವರು. ಮೂರನೇ ಕೋಟೆಗೆ ಬೃಹತ್ ಒರಟು ಕಲ್ಲನ್ನು ಬಳಸಿಕೊಂಡಿದ್ದಾರೆ. ಕೋಟೆಯ ತುದಿಭಾಗದಲ್ಲಿ ವಿಶಾಲವಾದ ಜಾಗವಿದೆ. ಉತ್ತರ ಮತ್ತು ದಕ್ಷಿಣ ದಿಕ್ಕಿಗೆ ಎರಡು ಎತ್ತರದ ಕಲ್ಲುಗಳ ಮೇಲೆ ಬುರುಜುಗಳಿದ್ದು, ದಕ್ಷಿಣ ಬುರುಜಿನ ಕೆಳಗೆ ಕಾವಲು ಕಾಯಲು ಎತ್ತರವಾದ ಗೋಡೆ ಮತ್ತು ವಿಶ್ರಾಂತಿ ಕೊಠಡಿಯನ್ನು ನಿರ್ಮಿಸಿದ್ದಾರೆ. ಕೋಟೆಯ ಉದ್ದಕ್ಕೂ ಚೌಕಾಕಾರದ ಕೊತ್ತಲಗಳಿವೆ. ತುಪ್ಪದ ಕಣಜಗಳು ಚೌಕಾಕಾರದ ಕಟ್ಟಡದ ಒಳಗೆ ಗಾರೆಯಿಂದ ನಯ ಮಾಡಿದವುಗಳಾಗಿವೆ. ದೊಣೆಗಳಿಗೆ ಕೊರಕಲುಗಳಲ್ಲಿ ಮಣ್ಣಿನ, ಗಾರೆ ಮತ್ತು ಇಟ್ಟಿಗೆಯಿಂದ ತಡೆಗೋಡೆಗಳನ್ನು ಕಟ್ಟಿ ನೀರನ್ನು ಸಂಗ್ರಹಿಸುತ್ತಿದ್ದರು. ಪ್ರಮುಖವಾಗಿ ಎಮ್ಮೆದೊಣೆ, ಸಿದ್ಧರ ದೊಣೆ, ದೇವಸ್ಥಾನದ ದೊಣೆ, ಆನೆದೊಣೆಗಳಿವೆ. ಅಧಿಕಾರಿಗಳ ವಸತಿ ಗೃಹಗಳು, ಅರಮನೆಯ ಆವರಣ, ಇನ್ನಿತರ ಕಟ್ಟಡಗಳು ಸಂಪೂರ್ಣವಾಗಿ ಹಾಳಾಗಿವೆ. ಆಳವಾದ ಸುಮಾರು ೫೦ ಅಡಿ ಉದ್ದದ ನೈಸರ್ಗಿಕವಾಗಿ ಬಂಡೆಯಲ್ಲಿರುವ ಕಂದಕ ಕೋಟೆ ಗೋಡೆಗೆ ಹೊಂದಿಕೊಂಡಿದೆ.

ಚನ್ನಕೇಶವ ದೇವಾಲಯ ಚಿಕ್ಕದಾದ ಗುಡಿಯಾಗಿದ್ದು, ದ್ವಾರದಲ್ಲಿ ದ್ವಾರಪಾಲಕರು, ಭಿತ್ತಿಯಲ್ಲಿ ಆಂಜನೇಯ, ನಾಗ, ಮತ್ಸ್ಯ, ಸಿಂಹ ಮನುಷ್ಯನನ್ನು ತಿನ್ನುತ್ತಿರುವ ಶಿಲ್ಪ, ಆನೆ, ಹೂಬಳ್ಳಿಗಳು, ಸ್ತ್ರೀಯರ ವಿವಿಧ ಭಂಗಿ, ಹಂಸಗಳ ಉಬ್ಬು ಶಿಲ್ಪಗಳಿವೆ. ಗರ್ಭಗುಡಿಯಲ್ಲಿ ಚನ್ನಕೇಶವನ ವಿಗ್ರಹವಿದೆ. ದೇವಾಲಯದ ಮುಂದೆ ಕಬ್ಬಿಣದ ದೀಪಸ್ತಂಭವಿದೆ. ಕೋಟೆಯ ಕೆಳಭಾಗದಲ್ಲಿ ಪೂರ್ವಕ್ಕೆ ಆಂಜನೇಯಸ್ವಾಮಿ ದೇವಾಲಯವಿದೆ.

## ೪. ಬಂಗಾರನಾಯಕನ ಬೆಟ್ಟ

ಬಂಗಾರನಾಯಕನ ಬೆಟ್ಟವು ನಿಡುಗಲ್ಲಿನ ಆಗ್ನೇಯ ದಿಕ್ಕಿಗೆ ಇದ್ದು, ಪಾವಗಡ ತಾಲ್ಲೂಕು ಕೇಂದ್ರದಿಂದ ೧೦ ಕಿ.ಮೀ. ದೂರದಲ್ಲಿದೆ. ಬಂಗಾರನಾಯಕನ ಬೆಟ್ಟವು ಪ್ರಾಚೀನ ಕಾಲದಿಂದಲೂ ಪ್ರಸಿದ್ಧವಾಗಿದ್ದು ರಾಮ, ಸೀತೆ, ಲಕ್ಷ್ಮಣ ಹಾಗೂ ಪಾಂಡವರು ವನವಾಸದ ಸಮಯದಲ್ಲಿ ಇಲ್ಲಿಗೆ ಬಂದಿದ್ದರೆಂದು ಸ್ಥಳೀಯರು ಹೇಳುತ್ತಾರೆ. ಕ್ರಿ ಶ. ೧೭ನೇ ಶತಮಾನದಿಂದ ಇಲ್ಲಿನ ಇತಿಹಾಸ ಆರಂಭವಾಗುತ್ತದೆ. ರಾಜಾನಾಯಕನೆಂಬ ಪಾಳೆಯಗಾರನಿಗೆ ಬಂಗಾರನಾಯಕ, ನರಸನಾಯಕ, ಚಿಕ್ಕನಾಯಕ ಮತ್ತು ಬಂಗಾರವ್ವನಾಗತಿ ಎಂಬ ನಾಲ್ವರು ಮಕ್ಕಳಿದ್ದರು. ಬಂಗಾರನಾಯಕನ ಬೆಟ್ಟಕ್ಕೆ ಹೊಂದಿಕೊಂಡಂತೆ ಮತ್ತೆರಡು ಬೆಟ್ಟಗಳಿದ್ದು, ಇವುಗಳಲ್ಲಿ ಮೂರು ಜನರು ಕೋಟೆ ಕೊತ್ತಲಗಳನ್ನು ನಿರ್ಮಿಸಿಕೊಂಡು ತಮ್ಮ ಹೆಸರನ್ನೇ ಇಟ್ಟುಕೊಂಡರು. ಬಂಗಾರನಾಯಕನ ವಂಶಸ್ಥರು ನಿಡುಗಲ್ಲು ವಂಶಸ್ಥರೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿದ್ದರು. ಬಂಗಾರನಾಯಕನು–ನಿಡುಗಲ್ಲಿನ ತಿಪ್ಪನಾಯಕನ ಮಗಳು ಹಾಗೂ ತಿಮ್ಮಣ್ಣ ನಾಯಕನ ತಂಗಿಯನ್ನು, ನರಸನಾಯಕನು–ತಿರುಮಲನಾಯಕನ ಮಗಳಾದ ತಿಮ್ಮಪ್ಪನಾಗತಿಯನ್ನು ಚಿಕ್ಕನಾಯಕನು–ಒಂದನೇ ಹೊಟ್ಟೆಪ್ಪನಾಯಕ ಅಕ್ಕಮ್ಮನಾಗತಿಯನ್ನು, ಬಂಗಾರವ್ವನಾಗತಿಯು ಓಬಳನಾಯಕನನ್ನು ವಿವಾಹವಾದರು.

ಈ ಮೂರು ಅರಸರ ಆಳ್ವಿಕೆಯ ಕಾಲದಲ್ಲಿ ಹೈದರಾಲಿಯು ಸೈನ್ಯದೊಂದಿಗೆ ಅನ್ವರ್ ಬಾಷಾ ಮತ್ತು ಖಾದರ್‌ನನ್ನು ಬಂಗಾರನಾಯಕನ ಬೆಟ್ಟದ ಮೇಲಿನ ದಾಳಿಗೆ ನೇಮಿಸಿದನು. ಇವರು ಬಂಗಾರನಾಯಕನ ಸಂಬಂಧಿಯಾದ ಓಬಳನಾಯಕನಿಗೆ ರಾಜ್ಯದ ಆಸೆ ತೋರಿಸಿ ಬಂಗಾರನಾಯಕ ಮತ್ತು ಆತನ ಹೆಂಡತಿಯೊಂದಿಗೆ ನಿಡುಗಲ್ಲಿಗೆ ಭೇಟಿ ನೀಡಿ ಹಿಂದಿರುಗುವಾಗ ಮಾರ್ಗ ಮಧ್ಯದಲ್ಲಿಯೇ ದಾಳಿ ಮಾಡಿ ಮಧುಗಿರಿ ಸೆರೆಯಲ್ಲಿಟ್ಟನು. ಜೊತೆಗೆ ದುರ್ಗವನ್ನು ಲೂಟಿ ಮಾಡಿದನು. ಕೊನೆಗೆ ೧೮ನೇ ಶತಮಾನದಲ್ಲಿ ಲಾರ್ಡ್‌ಕಾರನ್ ವಾಲಿಸ್‌ನ ಕಾಲದಲ್ಲಿ ಕೋಟೆಯನ್ನು ಹಾಳುಗೆಡವಲಾಯಿತು.

### ೪.೧. ಬಂಗಾರ ನಾಯಕನ ಬೆಟ್ಟದ ಕೋಟೆಯ ಲಕ್ಷಣಗಳು

ಕೋಟೆಯನ್ನು ಬೆಟ್ಟದ ದಕ್ಷಿಣ ದಿಕ್ಕಿಗೆ ಎತ್ತರವಾದ ತುದಿಯಲ್ಲಿ ನಿರ್ಮಿಸಿರುವುದರಿಂದ ಶತ್ರುಗಳು ಬಹುಬೇಗ ವಶಪಡಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಕೋಟೆಯ ಗೋಡೆಗೆ ಮಧ್ಯಮ ಗಾತ್ರದ ಸಣ್ಣ ಸಣ್ಣ ಸೈಜುಗಲ್ಲುಗಳನ್ನು ಬಳಸಿಕೊಂಡು ನಿರ್ಮಿಸಿದ್ದಾರೆ. ಬೆಟ್ಟದ ತುದಿಯ ಮೇಲೆ ಊರಿನ ಸುತ್ತ ಕೋಟೆಯನ್ನು ಮತ್ತು ಆಯಕಟ್ಟಿನ ಜಾಗದಲ್ಲಿ ಕೊತ್ತಲಗಳನ್ನು ನಿರ್ಮಿಸಿದ್ದಾರೆ. ಕೆಲವು ಕಡೆ ಬೃಹತ್ ಹೆಬ್ಬಂಡೆಗಳನ್ನೇ ಕೋಟೆಯ ಗೋಡೆ ಮತ್ತು ಕೊತ್ತಲಗಳಿಗೆ

ಬಳಸಿಕೊಂಡಿದ್ದಾರೆ. ಕೋಟೆಯ ಮುಖ್ಯ ಪ್ರವೇಶದ್ವಾರವು ಪೂರ್ವಕ್ಕಿದೆ. ಈ ಸುತ್ತಿನಲ್ಲಿ ಮದ್ದಿನಮನೆ, ಸ್ಮಶಾನ, ಉಗ್ರಾಣ, ತಣ್ಣೀರಿನ ಚಿಲುಮೆ, ಮಂಟಪಗಳು, ವಸತಿಗಳು ಇವೆ ಹಾಗೂ ಉಳುಮೆ ಮಾಡುತ್ತಿದ್ದರು ಎನ್ನಲಾದ ನಾಲ್ಕು ಎಕರೆ ಜಮೀನು ಇದೆ. ಇದರ ಪಕ್ಕದಲ್ಲೇ ನವಿಲುಗುಂಡ ಎಂದು ಕರೆಯುವ ಹೆಬ್ಬಂಡೆಯಿದೆ. ಇದನ್ನು ಕೊತ್ತಲಾಗಿ ಬಳಸುತ್ತಿದ್ದರು. ಕೋಟೆಗೆ ಪೂರ್ವ ಮತ್ತು ದಕ್ಷಿಣ ದಿಕ್ಕಿಗೆ ದ್ವಾರಗಳಿವೆ. ಪೂರ್ವದ ಊರಬಾಗಿಲ ಬಳಿ ಬೃಹತ್ ಗುಂಡು ಇದ್ದು, ಇದನ್ನು ರಾಜನಗುಂಡು ಎನ್ನುವರು ಈ ಗುಂಡಿನ ಮೇಲೆ ಕುಳಿತು ನ್ಯಾಯ ತೀರ್ಮಾನವನ್ನು ಮಾಡುತ್ತಿದ್ದರು ಎಂದು ಹೇಳುತ್ತಾರೆ. ಬೆಟ್ಟದ ತುದಿಯ ಉತ್ತರ ದಿಕ್ಕಿಗೆ ಅಮದಾಲಗುಂಡು ಇದ್ದು ಇಲ್ಲಿ ಕಾಳನ್ನು ಒಣಗಿಸಲು ಮತ್ತು ಕೊತ್ತಲಾಗಿಯೂ ಬಳಸುತ್ತಿದ್ದರು. ಪಶ್ಚಿಮ ದಿಕ್ಕಿನಲ್ಲಿ ಬೃಹತ್ ಗುಂಡಿಗೆ ಮೆಟ್ಟಿಲನ್ನು ಕೊರೆದಿದ್ದು ಇಲ್ಲಿ ಸೈನಿಕರು ಪಹರೆ ಕಾಯುತ್ತಿದ್ದರು. ಬೆಟ್ಟದ ದಕ್ಷಿಣ ದಿಕ್ಕಿನಲ್ಲಿ ಎತ್ತರವಾದ ಬಂಡೆಯ (ತಿಮ್ಮಪ್ಪನ ಗುಂಡು) ಮೇಲೆ ತಿಮ್ಮಪ್ಪ ದೇವಾಲಯವಿದೆ. ಇದರ ಪೂರ್ವಕ್ಕೆ ಕುದುರೆ ಲಾಯದ ಪಕ್ಕದಲ್ಲಿ ಎತ್ತರವಾದ ಬೃಹತ್ ಪ್ರಮಾಣದ ವೃತ್ತಾಕಾರದ ಕೊತ್ತಲಿದೆ. ಬಂಗಾರನಾಯಕನು ನಿಡುಗಲ್ಲು ಪಾಳೆಯಗಾರರಿಂದ ಪಡೆದಿದ್ದ ೧೨ ಪಡಿ ಬಂಗಾರವನ್ನು ರಕ್ಷಿಸಲು ಕಂಬಿಯುಳ್ಳ ಜೈಲನ್ನು ನಿರ್ಮಿಸಿ ಇದನ್ನು ಮುಟ್ಟಿದರೆ ಮೇಲಿನಿಂದ ಒಂದು ಕತ್ತಿ ಮುಟ್ಟಿದ ವ್ಯಕ್ತಿಯ ಮೇಲೆ ಬೀಳುವಂತೆ ಮಾಡಿದ್ದನು ಎಂದು ಸ್ಥಳೀಯರು ಹೇಳುತ್ತಾರೆ. ಆದರೆ ಇಂದು ಜೈಲಿನ ಭಾಗ ಹಾಳಾಗಿದೆ.

ಬೆಟ್ಟದ ತುದಿಯ ದಕ್ಷಿಣ ದಿಕ್ಕಿಗೆ ಇರುವ ದ್ವಾರದ ಕೆಳಭಾಗದಲ್ಲಿ ಗುರುದೊಣೆ, ವೃತ್ತಾಕಾರದ ಬಾವಿ, ಹೂವಿನದೊಣೆ, ಹೊಸದೊಣೆ, ರಾಮಪ್ಪದೊಣೆಗಳನ್ನು ಕಾಣಬಹುದಾಗಿದೆ. ಈ ಪ್ರದೇಶವನ್ನು ಸುತ್ತುವರೆದ ಕೋಟೆ ಗೋಡೆಯು ಕಲ್ಲು, ಮಣ್ಣಿನಿಂದ ನಿರ್ಮಾಣಗೊಂಡಿದೆ. ಬಂಗಾರ ನಾಯಕನ ಮನೆಯ ದೇವರಾದ ಕಂಬದರಾಯ ದೇವಾಲಯ ಬೆಟ್ಟದ ಉತ್ತರದಿಕ್ಕಿನಲ್ಲಿದೆ. ಇದು ಸುಮಾರು ೪-೫ ಅಡಿ ಎತ್ತರವಾಗಿದ್ದು, ಬಂಡೆಗಳಿಂದ ನಿರ್ಮಾಣವಾಗಿದೆ. ಈ ಗುಡಿಯಲ್ಲಿ ಲಿಂಗಾಕಾರದ ಕಲ್ಲಿದ್ದು ಇಲ್ಲಿಯೇ ೧೫ ಅಡಿ ಎತ್ತರದ ಗರುಡಗಂಭವಿದೆ. ಹೀಗೆ ಬಂಗಾರನಾಯಕನ ಬೆಟ್ಟದ ಕೋಟೆಯು ಹಲವು ಸ್ಮಾರಕಗಳನ್ನು ತನ್ನ ಒಡಿಲಲ್ಲಿ ಇಟ್ಟುಕೊಂಡು ಅವಸಾನದತ್ತ ಸಾಗುತ್ತಿದೆ.

### ಕನ್ನಡಮೇಡಿ ಕೋಟೆ:

ಕನ್ನಮೇಡಿಯು ನಿಡುಗಲ್ಲಿನ ದಕ್ಷಿಣಕ್ಕಿದ್ದು ಪಾವಗಡ ತಾಲ್ಲೂಕು ಕೇಂದ್ರದಿಂದ ೧೨ ಕಿ.ಮೀ. ದೂರದಲ್ಲಿದೆ. ಸ್ಥಳೀಯರು ಈ ಊರಿನ ಉಗಮದ ಬಗ್ಗೆ ಒಂದು ಐತಿಹ್ಯ ಹೇಳುತ್ತಾರೆ. ಈ ಪ್ರದೇಶದಲ್ಲಿ ಮಸಣಪ್ಪ ಮತ್ತು ಕೆಂಚಪ್ಪ ಎನ್ನುವವರು ಹೊಲದಲ್ಲಿ ನೇಗಿಲಿಗೆ ಚಿನ್ನದ

ಹಿಡಿಕೆಯನ್ನು ಹಾಕಿಕೊಂಡು, ವ್ಯವಸಾಯ ಮಾಡುತ್ತಿದ್ದರೆಂದು, ನೀರಿನ ದಣಿವನ್ನು ನೀಗಿಸಲು ನೀರನ್ನು ಕುಡಿಯಲು ಹೋದಾಗ ಅದೇ ವೇಳೆಗೆ ಪಾಲಕುಂಟೆಯ ಕಳ್ಳರು ಚಿನ್ನದ ಮೇಡಿಯೊಂದಿಗೆ ಎತ್ತುಗಳನ್ನು ಕದ್ದು ಒಯ್ದರು. ಪಾಲಕುಂಟೆ ಕಳ್ಳರು ಮೇಡಿಯನ್ನು ಕನ್ನ ಮಾಡಿದ್ದಕ್ಕೆ ಕನ್ನವಾದ ಮೇಡಿ ಕನ್ನಮೇಡಿ ಎಂದಾಗಿದೆ ಎನ್ನುತ್ತಾರೆ.

ಕನ್ನಮೇಡಿಯ ರಾಜಕೀಯ ಇತಿಹಾಸ ತಿಳಿಯಲು ಯಾವುದೇ ಆಧಾರಗಳಿಲ್ಲ. ದೊರೆತಿರುವ ಆಧಾರಗಳಿಂದ ರಾಜಕೀಯ ಇತಿಹಾಸವನ್ನು ತಿಳಿಯಲು ಪ್ರಯತ್ನಿಸಲಾಗಿದೆ. ಕನ್ನಮೇಡಿಯೂ ಪ್ರಾರಂಭದಲ್ಲಿ ಒಂದು ಅಗ್ರಹಾರವಾಗಿತ್ತು. ಆಗ ಈ ಪ್ರದೇಶ ಪೆನುಗೊಂಡೆಯ ಪಾಳೆಯಗಾರ ಸದಾಶಿವದೇವನ ಆಳ್ವಿಕೆಗೆ ಒಳಪಟ್ಟಿತ್ತು. ನಂತರ ಇಂದೂರಾಯ (ಇಂದ್ರಾಯ) ಎನ್ನುವವನು ಕ್ರಿ.ಶ. ೧೭೫೦ರಲ್ಲಿ ಐದು ಸುತ್ತಿನ ಕೋಟೆಯನ್ನು ಕಟ್ಟಿಸಿ ಆಳ್ವಿಕೆ ಮಾಡಿದನು.[೧೯] ಹೈದರ್-ಟಿಪ್ಪುವಿನ ದಾಳಿಯಿಂದ ಅಧಿಕಾರವನ್ನು ಕಳೆದುಕೊಂಡು ಕೋಟೆಯ ನಿರ್ಮಾಣ ಕಾರ್ಯ ನಿಂತಿತ್ತು.

ಕೋಟೆಯು ಅಭೇದ್ಯತೆಯಿಂದ ಕೂಡಿದ್ದು, ಗ್ರಾನೈಟ್ ಶಿಲೆಯ ಚೌಕಾಕಾರದ ಚಿಕ್ಕ ಚಿಕ್ಕ ಕಲ್ಲುಗಳಿಂದ ಕೋಟೆಯನ್ನು ನಿರ್ಮಿಸಲಾಗಿದೆ. ಕೋಟೆಯ ಮಧ್ಯೆ ಕಲ್ಲು ಮಣ್ಣನ್ನು ತುಂಬಿ ಗೋಡೆಯನ್ನು ವಿಶಾಲಗೊಳಿಸಿದ್ದಾರೆ. ಕೋಟೆಯ ಮುಖ್ಯದ್ವಾರ ಪಶ್ಚಿಮ ದಿಕ್ಕಿಗೆ ಇದ್ದು ಹಾಳಾಗಿದೆ. ಬೆಟ್ಟದ ಭಾಗವು ಉತ್ತರ ಮತ್ತು ದಕ್ಷಿಣ ಎರಡು ಕಡೆ ಹಬ್ಬಿದೆ. ಉತ್ತರ ದಿಕ್ಕಿಗಿರುವ ಬೆಟ್ಟವನ್ನು ಗುಜ್ಜಾರಪ್ಪನ ಬೆಟ್ಟ ಎಂದು ಕರೆಯುತ್ತಾರೆ. ದಕ್ಷಿಣ ದಿಕ್ಕಿಗಿರುವ ಬೆಟ್ಟದಲ್ಲಿ ಎರಡು ಸುತ್ತಿನ ಕೋಟೆಯಿದೆ. ಮೊದಲನೆ ಸುತ್ತು ಎರಡನೇ ಸುತ್ತಿನ ಕೋಟೆಯ ಸುತ್ತಲೂ ಇದೆ. ಕೋಟೆಯ ಗೋಡೆಯಲ್ಲಿ ಬಂದೂಕು ಕಿಂಡಿಗಳನ್ನು ಕೊರೆಯಲಾಗಿದೆ. ಈ ಕೋಟೆಯ ಪ್ರವೇಶದ್ವಾರ ೬ ಅಡಿ ಎತ್ತರವಾಗಿದ್ದು, ಒಳಭಾಗದಲ್ಲಿ ಅರಮನೆಯ ಭಾಗವಿದೆ. ಬೃಹತ್ ಕಲ್ಲುಗಳ ಮೇಲೆ ಚೌಕಾಕಾರದ ಕಟ್ಟಡವಿದ್ದು, ಕೆಲವು ಕಟ್ಟಡಗಳ ಅವಶೇಷಗಳು ಇವೆ. ದೋಣೆಗಳು ಗಾರೆ ಮತ್ತು ಇಟ್ಟಿಗೆಯಿಂದ ನಿರ್ಮಾಣವಾಗಿದೆ ಹಾಗೂ ಕೊತ್ತಲಗಳು ಚೌಕಾಕಾರ ಮತ್ತು ವೃತ್ತಾಕಾರದಲ್ಲಿವೆ.

ಮೂರನೇ ಸುತ್ತು ಗುಜ್ಜಾರಪ್ಪನ ಬೆಟ್ಟದಲ್ಲಿದೆ. ಈ ಸುತ್ತಿನ ಕೋಟೆಗೆ ಬೃಹತ್ ಹೆಬ್ಬಂಡೆಗಳನ್ನು ಕೊತ್ತಲ ಮತ್ತು ಗೋಪುರಗಳನ್ನಾಗಿ ಬಳಸಿಕೊಂಡಿದ್ದಾರೆ. ನಾಲ್ಕನೇ ಸುತ್ತಿನ ಕೋಟೆಯನ್ನು ದೋಣೆಕೋಟೆ ಎಂದು ಕರೆಯುತ್ತಾರೆ. ಇದು ವಿಶಾಲವಾದ ಹೆಬ್ಬಂಡೆಯ ಮೇಲೆ ನಿರ್ಮಾಣವಾಗಿದ್ದು, ದ್ವಾರಬಾಗಿಲು ಬಿದ್ದು ಹೋಗಿದೆ. ದ್ವಾರದ ಎರಡೂ ಬದಿಯಲ್ಲೂ ತೆರೆದ ಮಂಟಪವಿದ್ದ ಅವಶೇಷಗಳಿವೆ. ಈ ಕೋಟೆಯ ಗೋಡೆಗೆ ರಕ್ಷಣೆ ನೀಡಲು ಒಳಭಾಗದಲ್ಲಿ ಮಣ್ಣು, ಕಲ್ಲುಗಳಿಂದ ಇಳಿವೊರೆಗಳನ್ನು ನಿರ್ಮಿಸಿದ್ದಾರೆ. ಕೋಟೆದೋಣೆಯನ್ನು ವಿಶಾಲವಾಗಿ ನಿರ್ಮಿಸಲಾಗಿದ್ದು, ಅದರ ಮೇಲ್ಭಾಗದಲ್ಲಿ ಗಂಗಮ್ಮದೋಣೆಯಿದೆ. ಈ ಸುತ್ತಿನಲ್ಲಿ ಕೆಲವು

ಕಟ್ಟಡಗಳ ಅವಶೇಷಗಳಿದ್ದು, ಅವು ಯಾವ ಕಟ್ಟಡ ಎಂದು ಗುರುತಿಸಲು ಸಾಧ್ಯವಿಲ್ಲ. ಬೆಟ್ಟದ ತುದಿಯಲ್ಲಿ ಕೋಟೆಯ ಐದನೇ ಸುತ್ತು ಇದೆ. ಈ ಕೋಟೆಯ ದ್ವಾರವು ಬೃಹತ್ ಹೆಬ್ಬಂಡೆಯ ಕೆಳಭಾಗದಲ್ಲಿದ್ದು, ಹಲವು ತಿರುವುಗಳಿಂದ ಕೂಡಿದೆ. ವೃತ್ತಾಕಾರದ ಬುರುಜುಗಳು ಕೋಟೆಯ ಸುತ್ತಲೂ ಇವೆ. ಒಳಗೆ ಆಂಜನೇಯ ದೇವಾಲಯವಿದ್ದು ಸುಮಾರು ೫ ಅಡಿ ಎತ್ತರವಾಗಿದೆ. ಮುಂದೆ ಒಂದು ಕಬ್ಬಿಣದ ದೀಪಸ್ತಂಭವಿದೆ. ಇದರ ಮೇಲ್ಭಾಗದಲ್ಲಿ ವಿಶಾಲವಾದ ಕೋಟೆಯ ತುತ್ತ ತುದಿಯಿದ್ದು ಚೌಕಾಕಾರ ಮತ್ತು ವೃತ್ತಾಕಾರದ ಕೊತ್ತಲಗಳಿವೆ. ಅರಮನೆಯ ತಳಪಾಯ, ಹಲವು ಕಟ್ಟಡಗಳ ಅವಶೇಷಗಳಿವೆ. ಆಯತಾಕಾರದ ಎರಡು ಗಾರೆಯಿಂದ ಮಾಡಿದ ತುಪ್ಪದ ಕಣಜಗಳಿವೆ. ಹೀಗೆ ಈ ಕೋಟೆಯು ನಿರ್ಮಾಣದ ಕಾಲಕ್ಕೆ ಭದ್ರತೆಯಿಂದ ಕೂಡಿದ್ದು, ನಂತರ ಅದನ್ನು ಪುನರ್ ನಿರ್ಮಿಸಿಲ್ಲದ ಕಾರಣ ಅದು ಅವನತಿ ಹೊಂದಿರುವುದನ್ನು ಕಾಣಬಹುದಾಗಿದೆ. ಕೋಟೆಯ ಕೆಳಭಾಗದಲ್ಲಿ ವಿನಾಯಕಸ್ವಾಮಿ, ಈಶ್ವರ, ಲಕ್ಷ್ಮೀದೇವರ ಮತ್ತು ವೆಂಕಾವದೂತರು ತಪಸ್ಸು ಮಾಡಿರುವ ಆಶ್ರಮ ಮತ್ತು ಗುಹೆಗಳಿವೆ.

**ಅಡಿಟಿಪ್ಪಣಿಗಳು:**

೦೧. ಸೂರ್ಯನಾಥ ಕಾಮತ್ (ಸಂ), ೧೯೮೬, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ-೩, ಪುಟ-೫೩೬.

೦೨. ರಾಮಚಂದ್ರಪ್ಪ ಹ. (ಸಂ), ೨೦೦೪, ಪಿನಾಕಿನಿ ಸ್ಮರಣ ಸಂಚಿಕೆ, ಪುಟ-೧೩.

೦೩. ಬಸವರಾಜ್ ಡಿ.ಆರ್, ೨೦೦೬, ನಿಡುಗಲ್ಲುದುರ್ಗ, ಪುಟ-೬, ೭.

೦೪. ರಾಮಚಂದ್ರಪ್ಪ ಹ. (ಸಂ), ಪೂರ್ವೋಕ್ತ, ಪುಟ-೧೩.

೦೫. ಪುಷ್ಪ ತಾ.ಸ, ೧೯೮೫, ನಿಡುಗಲ್ಲು ವೈಭವ, ಪುಟ-೯೬, ೯೭.

೦೬. ಕವಿತಾ ಕೃಷ್ಣ (ಸಂ), ೨೦೦೨, ಜಯಮಂಗಲಿ, ಪುಟ-೪೩.

೦೭. ಎಪಿಗ್ರಾಫಿಯ ಕರ್ನಾಟಿಕ ಸಂಪುಟ-೧೨, ಪಾವಗಡ-೫೨, ಕಿ.ಶ. ೧೨೩೨.

೦೮. ವಸು. ಎಂ.ವಿ. (ಸಂ), ೨೦೦೧, ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪುಟ-೫೭, ೬೨.

೦೯. ಯೋಗೀಶ್ವರಪ್ಪ, ೨೦೦೨, ಕಲ್ಪಸಿರಿ, ೬೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಪುಟ-೩೪೩.

೧೦. ವಸು. ಎಂ.ವಿ. (ಸಂ), ಪೂರ್ವೋಕ್ತ, ಪುಟ-೫೭-೬೨.

೧೧. ಪರಮಶಿವಮೂರ್ತಿ ಡಿ.ವಿ., ೧೯೯೬, ಸಂಶೋಧನೇ ಸಿರಿ, ಪುಟ-೧೨.

೧೨. ಕವಿತಾ ಕೃಷ್ಣ (ಸಂ), ಪೂರ್ವೋಕ್ತ, ಪುಟ-೪೨.

೧೩. ವಸು. ಎಂ.ವಿ. (ಸಂ), ಪೂರ್ವೋಕ್ತ, ಪುಟ-೩೧.

೧೪. ಎಪಿಗ್ರಾಫಿಯ ಕರ್ನಾಟಿಕ ಸಂಪುಟ-೧೨, ಪಾವಗಡ-೫೨, ಕ್ರಿ.ಶ. ೧೨೩೨.

೧೫. ಎಪಿಗ್ರಾಫಿಯ ಕರ್ನಾಟಕ ಸಂಪುಟ-೧೨, ಪಾವಗಡ-೫೦, ಕ್ರಿ.ಶ. ೧೨೪೮.

೧೬. ಪರಮಶಿವಮೂರ್ತಿ ಡಿ.ವಿ., ಪೂರ್ವೋಕ್ತ, ಪುಟ-೨೪.

೧೭. ರಾಮಚಂದ್ರಪ್ಪ ಹ. (ಸಂ), ಪೂರ್ವೋಕ್ತ, ಪುಟ-೧೪.

೧೮. ಗೋಪಾಲ್ ಆರ್. (ಸಂ), ೨೦೦೯, ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪುಟ-೪೦೪, ೪೦೮.

೧೯. ರಾಮಚಂದ್ರಪ್ಪ ಹ. (ಸಂ), ಪೂರ್ವೋಕ್ತ, ಪುಟ-೧೩, ೧೪, ೧೫.

## ಅಧ್ಯಾಯ – ೫

# ರಕ್ಷಣಾ ಸಂಬಂಧಿ ಸ್ಮಾರಕಗಳು

ರಾಜನು ತನ್ನ ರಾಜ್ಯವನ್ನು ರಕ್ಷಿಸಲು ಕೇವಲ ಕೋಟೆಯ ಗೋಡೆಯೊಂದರಿಂದಲೇ ಸಾದ್ಯವಿಲ್ಲ. ಕೋಟೆಯ ಗೋಡೆಗೆ ಹೊಂದಿಕೊಂಡಂತೆ ಹಾಗೂ ಕೋಟೆಯ ಒಳಗೆ ರಕ್ಷಣೆಗೆ ಸಂಬಂಧಿಸಿದ ಮುಖ್ಯ ಭಾಗ ಅಥವಾ ಲಕ್ಷಣಗಳನ್ನು ಹೊಂದಿದ್ದರೆ ಮಾತ್ರ ಒಂದು ಕೋಟೆ ಅಬೇಧ್ಯವಾಗಲು ಸಾಧ್ಯವಾಗುತ್ತದೆ. ಇಲ್ಲವೆಂದರೆ ಶತ್ರುಗಳಿಗೆ ಬಹು ಬೇಗ ವಶವಾಗುವ ದುರ್ಬಲ ಕೋಟೆಯಾಗುತ್ತದೆ. ಕೋಟೆಯಲ್ಲಿರುವ ಇಂತಹ ಪ್ರಮುಖ ಭಾಗಗಳೆಂದರೆ ಬಾಗಿಲುಗಳು, ಕಂದಕ, ಕೋಟೆಯ ತೆನೆ, ಅಂಬುಗಂಡಿ, ತೋಪು, ತುಪ್ಪದ ಕಣಜ, ದೇವಾಲಯ, ಅರಮನೆ, ಮದ್ದಿನಮನೆ, ಸೈನಿಕರ ವಸತಿನೆಲೆಗಳು, ನೀರಿನ ಸಂಗ್ರಹಣೆ ಮೊದಲಾದವುಗಳು.

### ೧. ದ್ವಾರಬಾಗಿಲುಗಳು

ಬುಧ ಭೂಷಣ ಮತ್ತು ಆಕಾಶ ಭೈರವ ಕಲ್ಪಗಳಲ್ಲಿ ದ್ವಾರದ ಬಗ್ಗೆ ಉಲ್ಲೇಖವಾಗಿದ್ದು ಇವುಗಳ ಪ್ರಕಾರ ದ್ವಾರಬಾಗಿಲು ೩ ಶಿಷ್ಕು (೪೧/೨ಅಡಿ) ೬ ಶಿಷ್ಕು (೯ಅಡಿ) ಎತ್ತರ ಇರಬೇಕು. ಇದೇ ಉತ್ತಮ ದ್ವಾರ, ಮೂರೂವರೆ ಅಥವಾ ೪೧/೨ ಅಡಿ ಅಗಲ ಮತ್ತು ೭೧/೨ ಅಡಿ ಉತ್ತರವಿದ್ದರೆ ಮಧ್ಯಮ, ೩ಅಡಿ ಅಗಲ ೬ಅಡಿ ಎತ್ತರವಿದ್ದರೆ ಅಧಮ ಎಂದು ವಿವರಣೆಯಿದೆ. ಅಲ್ಲದೆ ಯಾವ ದ್ವಾರವನ್ನು ಶಿಲೆಯ ಚೌಕಟ್ಟಿನಲ್ಲಿ ಜೋಡಿಸಲಾಗಿರುತ್ತದೆಯೋ ಅದು ಮಧ್ಯಮ ದರ್ಜೆಯೆಂದು ತಿಳಿಯಬೇಕು. ಅದರಲ್ಲಿಯ ಪುಂಶಿಲೆ (ಅದಕ್ಕೆ ಹೊಡೆದಾಗ ಗಂಟಾನಾದ ಶಬ್ದ ಬರುತ್ತದೆ) ಯಾಗಿದ್ದರೆ ಅದು ಶ್ರೇಷ್ಟ ಸ್ತ್ರೀಶಿಲೆ (ಯಾವ ಶಿಲೆ ಮೂರುಶಬ್ದಗಳನ್ನು ಕೊಡುತ್ತದೆಯೋ ಅದು ಸ್ತ್ರೀಶಿಲೆ) ಯಾಗಿದ್ದರೆ ಮಧ್ಯಮ, ಇನ್ನು ನಪುಂಸಕ [ಒಂದು ವಿಚಿತ್ರ ಶಬ್ದ ಹುಲ್ಲಿನ ಕಟ್ಟಿಗೆ ಹೊಡೆದ ಹಾಗೆ) ಬಂದರೆ ಅದು ನಪುಂಸಕ ಶಿಲೆ] ಶಿಲೆಯಾಗಿದ್ದರೆ

ಅಧಮ ಎಂಬುದಾಗಿ ಪರಿಗಣಿಸಲಾಗುತ್ತದೆ. ಪ್ರತಿಯೊಂದು ದ್ವಾರದ ಹೊಸ್ತಿಲ ಮೇಲೆ ಬಲಭದ್ರನ ಚಿತ್ರ ಮತ್ತು ಮೇಲ್ಭಾಗದಲ್ಲಿ ಯಕ್ಷರಾಕ್ಷಸರಂಥ ಚಿತ್ರಣ ಎದ್ದು ಕಾಣುವಂತಿರಬೇಕು. ಅದರ ಮೇಲೆ ಭಯಂಕರ ಸಿಂಹದ ಆಕೃತಿಯನ್ನು ಚಿತ್ರಸುವುದು ಒಳ್ಳೆಯದು. ಹಾಗೆಯೇ ವ್ಯಾಘ್ರ ಮುಖವೂ ಇರಬಹುದು ಎಂದು ದ್ವಾರದ ವಾಸ್ತುಶಿಲ್ಪದ ಬಗ್ಗೆ ಮಹತ್ವದ ಸಂಗತಿಗಳನ್ನು ಹೇಳುತ್ತದೆ.[೧]

ನಿಡುಗಲ್ಲಿನಲ್ಲಿಯ ದ್ವಾರಬಾಗಿಲುಗಳು ವಿವಿಧ ರೀತಿಯ ತಿರುವುಗಳಿಂದ ಅಭೇಧ್ಯವಾಗಿವೆ. ನಿಡುಗಲ್ಲು ಹಳ್ಳಿಯಿಂದ ಕೋಟೆಯನ್ನು ಪ್ರವೇಶಿಸಲು ದಕ್ಷಿಣ ದಿಕ್ಕಿಗಿರುವ ಸಿನ್ನ ಅಥವಾ ಸಿರಾಕೋಟೆಯ ದ್ವಾರಬಾಗಿಲನ್ನು ಬಳಸಬೇಕು. ಇದರ ಎರಡೂ ಬದಿಯಲ್ಲೂ ಎತ್ತರದ ವೇದಿಕೆಯ ಮೇಲೆ ಒರಟು ಕಲ್ಲಿನಿಂದ ತೆರೆದ ಮಂಟಪವಿದೆ. ಇದು ಯಾವುದೇ ಅಲಂಕಾರವಿಲ್ಲದೆ ಸರಳವಾಗಿದೆ. ಕೋಟೆಯ ಮುಖ್ಯ ಪ್ರವೇಶದ್ವಾರ ಇರುವುದು ಕೋಟೆಯ ಪೂರ್ವಕ್ಕೆ. ಇದನ್ನು ಪಾಗೊಂಡೆ ಊರಬಾಗಿಲು ಎಂದು ಕರೆಯುತ್ತಾರೆ. ಇದು ವಾಸ್ತು ಶೈಲಿಯ ದೃಷ್ಟಿಯಿಂದ ಚಿತ್ರದುರ್ಗ ಮತ್ತು ಗುಮ್ಮನಾಯಕನಹಳ್ಳಿಯ ಕೋಟೆಯ ದ್ವಾರದಂತೆ ಇದೆ.[೨] ಅನಿರೀಕ್ಷಿತ ಅನೇಕ ತಿರುವುಗಳಿಂದ ಕೂಡಿದ್ದು ಹೊರಗಿನಿಂದ ದಾಳಿ ಮಾಡುವವರಿಗೆ ಕಠಿಣವಾಗಿರುತ್ತಿತ್ತು. ವಜ್ರದ ಊರಬಾಗಿಲು ಅಭೇಧ್ಯವಾಗಿದ್ದು ಗಾರೆಯಿಂದ ಅಲಂಕೃತಗೊಂಡಿದೆ. ಈ ದ್ವಾರಕ್ಕೆ ಮರದಿಂದ ಮಾಡಿದ ಭದ್ರವಾದ ಬಾಗಿಲು ಇತ್ತೆಂದು ಹೇಳಲು ದ್ವಾರದ ಕೆಳಗೆ ಮತ್ತು ಮೇಲ್ಭಾಗದಲ್ಲಿ ರಂಧ್ರಗಳನ್ನು ಕೊರೆದಿರುವುದು ಪುಷ್ಠಿ ನೀಡುತ್ತದೆ. ದ್ವಾರಬಾಗಿಲನ್ನು ಮುಚ್ಚಿದಾಗ ತುರ್ತು ಸಮಯದ ಬಳಕೆಗಾಗಿ ದಿಡ್ಡಿಬಾಗಿಲಿದೆ. ದ್ವಾರದ ಎರಡೂ ಬದಿಗಳಲ್ಲಿರುವ ತೆರೆದ ಮಂಟಪದ ಜಗತಿಗಳಲ್ಲಿ ಹೂಬಳ್ಳಿ ಸಿಂಹ, ಆನೆ, ಹುಲಿ, ರಥದಶಿಲ್ಪ, ಕೂರ್ಮ, ವೃಶ್ಚಿಕ ಉಬ್ಬುಶಿಲ್ಪಗಳಿವೆ. ಸ್ಥಳೀಯರು ಹೇಳುವಂತೆ ಮುಂದೇಲರ ಮತ್ತು ಎಮ್ಮೆಲವರ ಹೆಣ್ಣು ಮಕ್ಕಳ ದ್ವಾರಪಾಲಕರ ಉಬ್ಬುಶಿಲ್ಪಗಳಿದ್ದು ಇವು ಲಜ್ಜಾಗೌರಿಶಿಲ್ಪಗಳಾಗಿವೆ. ಸಿಂಹ, ಆನೆ, ಕೂರ್ಮ, ವೃಶ್ಚಿಕ, ಹುಲಿಗಳು ಮುಂತಾದ ಪ್ರಾಣಿಗಳನ್ನು ಕೆತ್ತಿರುವುದರಿಂದ ಈ ದ್ವಾರ ಎಷ್ಟು ಅಬೇಧ್ಯವಾಗಿತ್ತು ಎಂಬುದನ್ನು ಸೂಚಿಸುತ್ತದೆ. ದ್ವಾರದ ಮೇಲ್ಭಾಗದಲ್ಲಿ ಕೀರ್ತಿಮುಖವಿದ್ದು ಕೆಲವು ಕಡೆ ಅಂಬುಗಂಡಿಗಳು ಮತ್ತು ಹೊರಭಾಗದಲ್ಲಿ ಚೂಪಾದ ಕಲ್ಲುಗಳು ಗೋಡೆಗೆ ಹೊಂದಿಕೊಂಡಂತೆ ಮುಂಬಾಚಿವೆ. ಇದನ್ನು ಗಮನಿಸಿದರೆ ಆನೆಯಿಂದ ಗೋಡೆಯನ್ನು ಗುದ್ದಿಸದಂತೆ ರಕ್ಷಣಾ ತಂತ್ರವನ್ನು ಬಳಸಿದ್ದಾರೆ ಎಂದು ಊಹಿಸಬಹುದು. ಒಂದು ವೇಳೆ ಆನೆ ಗೋಡೆಗೆ ಗುದ್ದಿದ್ದರೆ ಚೂಪಾದ ಕಲ್ಲು ಆನೆಗೆ ಚುಚ್ಚಿಕೊಳ್ಳುತ್ತಿತ್ತು. ಗೋಡೆಯಲ್ಲಿ ಮಳೆನೀರು ಕೆಳಹೋಗಲು ಗಾರೆಯ ಇಳಿವೊರೆಯನ್ನು ನಿರ್ಮಿಸಿದ್ದಾರೆ. ಸೀಮಲಯ್ಯನ ದ್ವಾರಬಾಗಿಲಲ್ಲಿ ಎರಡೂ ಬದಿಗಳಲ್ಲೂ ಬೃಹತ್ ಚೌಕಾಕಾರದ ಕೊತ್ತಲುಗಳಿರುವುದರಿಂದ ಇವುಗಳೇ ಬೃಹತ್ ದ್ವಾರಬಾಗಿಲುಗಳಾಗಿ ರಕ್ಷಣೆ ನಿರ್ವಹಿಸುತ್ತದಂತೆ ತೋರುತ್ತದೆ. ಈ ದ್ವಾರದಲ್ಲಿ ನಾಗ ಮತ್ತು ರುಂಡ ಮಾತ್ರವಿರುವ

ಶಿಲ್ಪಗಳಿವೆ. ಶೃಂಗಾರದ ಬಾಗಿಲು ಅನೇಕ ತಿರುವುಗಳಿಂದ ಕೂಡಿದ್ದು ಎರಡೂ ಬದಿಯಲ್ಲಿ ಭೈರವನ ಶಿಲ್ಪಗಳಿರುವುದು ದ್ವಾರದ ಅಭೇಧ್ಯತೆಯನ್ನು ಸೂಚಿಸುತ್ತದೆ. ಮಾಟನೂರ (ಪೆನುಗೊಂಡೆ) ಊರಬಾಗಿಲು ಎರಡೂ ಬದಿಯಲ್ಲಿ ಬೃಹತ್ ಆದ ಕೊತ್ತಲುಗಳನ್ನು ಹೊಂದಿದ್ದು ದ್ವಾರದ ಭಾಗ ಚಿಕ್ಕ ಓಣಿಯಂತಿರುವುದರಿಂದ ಶತ್ರುಗಳು ಈ ದ್ವಾರದಲ್ಲಿ ಬಂದಾಗ ಸೈನಿಕರು ಸುಲಭವಾಗಿ ಇವರ ಮೇಲೆ ದಾಳಿ ಮಾಡ ಬಹುದಾದ ರೀತಿಯಲ್ಲಿದೆ. ಮುಂಭಾಗದಲ್ಲಿ ಲಕ್ಷ್ಮಣೇಶ್ವರ ದೇವಾಲಯವಿದೆ. ಅದೇ ರೀತಿ ಚನ್ನರಾಯನ ಕೋಟೆಯ ದ್ವಾರಬಾಗಿಲು, ಕಾಳ ಹಸ್ತೇಶ್ವರ ದ್ವಾರಬಾಗಿಲುಗಳು ಸಹ ಅಬೇಧ್ಯವಾಗಿವೆ. ದೇವರ ಬೆಟ್ಟ, ಯಲ್ಲಪ್ಪನಾಯಕನ ಹೊಸಕೋಟೆಯ ನಿಡುಗಲ್ಲು ಊರಬಾಗಿಲು, ಸಂತೆ ಊರಬಾಗಿಲು, ಪೆನುಗೊಂಡ ಊರಬಾಗಿಲು, ಬಂಗಾರನಾಯಕನ ಬೆಟ್ಟ, ಕನ್ನಮೇಡಿಯ ದ್ವಾರಬಾಗಿಲುಗಳು ಸಹ ಅಬೇಧ್ಯವಾಗಿದ್ದವು ಎಂಬುದನ್ನು ಅವುಗಳ ಅಳಿದುಉಳಿದ ಅವಶೇಷಗಳಿಂದ ತಿಳಿಯಬಹುದಾಗಿದೆ.

೨. ದೇವಾಲಯ

ಸಾಮಾನ್ಯವಾಗಿ ಕೋಟೆಯ ರಕ್ಷಣೆಗೆಂದು ವಾಸ್ತುಬದ್ಧವಾಗಿ ಕೋಟೆಯ ಪೂರ್ವಕ್ಕೆ ಆಂಜನೇಯ ಅಥವಾ ಶಿವ ದೇವಾಲಯವನ್ನು ನಿರ್ಮಿಸಲಾಗುತ್ತಿತ್ತು. ಏಕೆಂದರೆ ಆಂಜನೇಯ ಗ್ರಾಮದ ರಕ್ಷಕನಾಗಿದ್ದು ಆಂಜನೇಯ ದೇವಾಲಯವಿಲ್ಲದ ಊರಿಲ್ಲ ಜೊತೆಗೆ ಶಕ್ತಿಯ ಪ್ರತಿರೂಪ ಆಂಜನೇಯನಾಗಿರುವುದರಿಂದ ದ್ವಾರದಲ್ಲಿ ಆಂಜನೇಯ ದೇವಾಲಯ ಇರುವುದು ಶತೃಗಳಿಗೆ ಕೋಟೆಯ ಶಕ್ತಿಯನ್ನು ಸೂಚಿಸುವಂತೆ ಮಾಡುವುದಾಗಿತ್ತು. ನಿಡುಗಲ್ಲು ಕೋಟೆಯಲ್ಲಿ ಅಷ್ಟದಿಕ್ಕುಗಳಲ್ಲೂ, ಅಷ್ಟದುರ್ಗಿಯರು, ಅಷ್ಟಭೈರವರು, ಅಷ್ಟಗಣಪತಿಗಳನ್ನು ಪ್ರತಿಷ್ಟಾಪಿಸಿದ್ದಾರೆ.[೩] ಪಾಗೊಂಡೆ ಊರಬಾಗಿಲಲ್ಲಿ ಆಂಜನೇಯ ದೇವಾಲಯವನ್ನು, ಸಿರಾ ಅಥವಾ ಸಿನ್ನಕೋಟೆ ಊರಬಾಗಿಲ ಮುಂದೆ ಈಶ್ವರ ದೇವಾಲಯದಲ್ಲಿ ಕಾಳಭೈರವನ ಮೂರ್ತಿಯನ್ನು ಸೀಮಲಯ್ಯನ ದಿಡ್ಡಿಬಾಗಿಲಲ್ಲಿ ನಾಗಶಿಲ್ಪ ಮತ್ತು ರುಂಡಮಾತ್ರವಿರುವ ದುರ್ಗಿಯ ಶಿಲ್ಪ, ಶೃಂಗಾರದ ಬಾಗಿಲಬಳಿ ಭೈರವನ ಮೂರ್ತಿಯನ್ನು, ಮಾಟನೂರ ಅಥವಾ ಪೆನುಗೊಂಡೆ ಊರಬಾಗಿಲ ಬಳಿ ಲಕ್ಷ್ಮೇಶ್ವರ ದೇವಾಲಯವನ್ನು, ಕಾಳಹಸ್ತೇಶ್ವರ ಕೋಟೆ ಊರಬಾಗಿಲ ಮುಂದೆ ಕಾಳಹಸ್ತೇಶ್ವೇರ ದೇವಾಲಯವನ್ನು ನಿರ್ಮಿಸಿರುವುದನ್ನು ನೋಡಿದಾಗ ಅವರು ರಕ್ಷಣೆಗೆ ಎಷ್ಟು ಪ್ರಾಮುಖ್ಯತೆ ನೀಡಿದ್ದರು ಎಂಬುದನ್ನು ಅರ್ಥಮಾಡಿಕೊಳ್ಳಬಹುದಾಗಿದೆ. ಜನಪದ ಸಾಹಿತ್ಯದಲ್ಲಿ ಉಲ್ಲೆಖವಾಗಿರುವಂತೆ ನಿಡುಗಲ್ಲು ದುರ್ಗದ ಅಷ್ಟದಿಕ್ಕುಗಳಿಗೂ ಅಷ್ಟದುರ್ಗಿಯರ, ಅಷ್ಟಭೈರವರ, ಅಷ್ಟಗಣಪತಿಗಳ ಹದ್ದಿನಕಾವಲು ಇದ್ದಿದರಿಂದ ಅಶ್ವಪತಿಯಾಗಲಿ, ಗಜಪತಿಯಾಗಲಿ ವಶಪಡಿಸಿಕೊಳ್ಳಲಾಗದಂತಹ ಅಭೇಧ್ಯ ಕೋಟೆ ಎಂದು ವರ್ಣಿಸಿದ್ದಾರೆ. ವೀರಭದ್ರ, ಕಾಳಭೈರವ, ದುರ್ಗಿಯ ಶಿಲ್ಪಗಳು ಭಯಾನಕತೆ ಮತ್ತು ಅಭೇಧ್ಯತೆಯ ಸಂಕೇತವಾಗಿದ್ದು ಶತ್ರುಗಳಿಗೆ ಭಯದ ವಾತಾವರಣವನ್ನು ಮೂಡಿಸಲು ಈ ಮೂರ್ತಿಗಳನ್ನು

ಪ್ರತಿಷ್ಠಾಪಿಸುತ್ತಿದ್ದು, ಗಣಪತಿಯು ವಿಘ್ನ ನಿವಾರಕನಾಗಿದ್ದು ಕೋಟೆಯ ವಿಘ್ನಗಳನ್ನು ದೂರ ಮಾಡುತ್ತಾನೆಂದು ಪ್ರತಿಷ್ಠಾಪಿಸುತ್ತಿದ್ದರು.

ನಿಡುಗಲ್ಲು ದುರ್ಗದ ದೇವಾಲಯದ ಬಗ್ಗೆ ಚೆನ್ನಪ್ಪ ಕವಿಯು ನಿಡುಗಲ್ಲು ದುರ್ಗಾಷ್ಟಕದಲ್ಲಿ ಈ ರೀತಿ ಹೊಗಳಿದ್ದಾನೆ.

ಉತ್ತಮಾಂಗದಿ, ನಂದಿಕೇಶ್ವರನ ಉರದಲ್ಲಿ
ನಿತ್ಯವೆನಿಸುವ ಕಾಳಹಸ್ತೇಶ್ವರನನು
ಮತ್ತೆ ನಾಭಿಸ್ಥಾನದಲಿ ನಾಗೇಶ್ವರನ
ಬಿತ್ತರದ ತೊಡೆಗಳಲಿ ಭೀಮೇಶ್ವರನ
ಎಡದ ಭಾಗದಲಿ ನಗರೇಶ ಗೌರೀಶ್ವರರ
ಕಡುಬಲದೆ ಸೋಮೇಶ ಮಲ್ಲೇಶ್ವರನನು
ಮೃಡನ ಕಿಡಿಗಣ್ಣಿನಿಂದೊಗೆದ ವೀರೇಶ್ವರನ
ಎಡೆವಿಡದೆ ಮುಂದಿಕ್ಕಿನಲಿ ತಳೆದಿಹುದು.[೪]

ಅದೇ ರೀತಿ ದೇವರ ಬೆಟ್ಟದಲ್ಲಿ ರಂಗನಾಥಸ್ವಾಮಿ ದೇವಾಲಯ, ಯಲ್ಲಪ್ಪನಾಯಕನ ಹೊಸ ಕೋಟೆಯಲ್ಲಿ ಪೂರ್ವದಿಕ್ಕಿಗೆ ಆಂಜನೇಯ, ಪಶ್ಚಿಮ ದಿಕ್ಕಿಗೆ ಚನ್ನಕೇಶವ ದೇವಾಲಯವಿದೆ. ಕನ್ನಮೇಡಿ ಕೋಟೆಗೆ ಆಂಜನೇಯಸ್ವಾಮಿ, ಬಂಗಾರನಾಯಕನ ಬೆಟ್ಟಕ್ಕೆ ಕಂಬದರಾಯ ದೇವಾಲಯಗಳು ರಕ್ಷಣೆಯನ್ನು ಮಾಡುತ್ತವೆ ಎಂಬುದು ಸ್ಥಳೀಯರ ನಂಬಿಕೆ.

೩. ಅರಮನೆಗಳು

ಸಾಮಾನ್ಯವಾಗಿ ರಾಜ ಅಥವಾ ರಾಣಿಯರ ರಕ್ಷಣೆಗಾಗಿ ಅರಮನೆಯ ಸುತ್ತಲೂ ಕೋಟೆಯನ್ನು ಕಟ್ಟುತ್ತಿದ್ದರು. ನಿಡುಗಲ್ಲಿನ ಭೈರವನ ಕೋಟೆ ಸುತ್ತಿನಲ್ಲಿ ಅರಮನೆಯ ಆವರಣವಿದೆ. ಇದು ಸಂಪೂರ್ಣವಾಗಿ ಮಣ್ಣಿನಿಂದ ನಿರ್ಮಾಣವಾಗಿದ್ದು ಕಮಾನಿನಾಕಾರದ ದ್ವಾರಗಳಿವೆ. ಅರಮನೆಯ ಒಳಗೆ ಬೃಹತ್ ಹೆಬ್ಬಂಡೆಯಿದ್ದು, ಬಂಡೆಯ ಮೇಲ್ಭಾಗದಲ್ಲಿ ಕಲ್ಲು ಮತ್ತು ಮಣ್ಣಿನ ಕಟ್ಟಡವಿದ್ದು ಇದನ್ನು ಕಾವಲು ಗೋಪುರವಾಗಿ ಉಪಯೋಗಿಸುತ್ತಿದ್ದರು ಎಂದು ಊಹಿಸಬಹುದು. ಈ ಗೋಡೆಗೆ ಬಂಡೆಯಲ್ಲಿ ಕಬ್ಬಿಣದ ಮೊಳೆಗಳನ್ನು ಬಿಗಿಯಾಗಲು ಬಳಸಿದ್ದಾರೆ. ಬಂಡೆಯಲ್ಲಿ ಹಲವು ಗೂಡುಗಳಿದ್ದು, ರಾಜನು ನ್ಯಾಯ ತೀರ್ಮಾನ ಮಾಡಲು ಇದನ್ನು ಬಳಸುತ್ತಿದ್ದಂತೆ ತೋರುತ್ತದೆ. ಇದರ ಒಂದು ಬದಿಯಲ್ಲಿ ಅರ್ಧಚಂದ್ರಾಕಾರದ ಬಾವಿಯಿದ್ದು ಅದರ ಎರಡು ಕಂಬಗಳಲ್ಲಿ ನಂದಿಯ ಶಿಲ್ಪಗಳನ್ನು ಚಿತ್ರಿಸಿದ್ದಾರೆ. ಮತ್ತೊಂದು ಬದಿಯಲ್ಲಿ ಇಟ್ಟಿಗೆ ಮತ್ತು ಗಾರೆಯನ್ನು ಬಳಸಿ ನಿರ್ಮಿಸಿದ ಗೋಳಾಕಾರದ ಮುಸ್ಲಿಂಶೈಲಿಯ ಕಟ್ಟಡವಿದ್ದು

ಇದನ್ನು ಕೆಲವರು ರಾಜನು ಗುಪ್ತ ಸಮಾಲೋಚನೆ ಮಾಡುವ ಕಟ್ಟಡ ಎಂದು, ಮತ್ತೆ ಕೆಲವರು ಮಾರಮ್ಮ ದೇವಾಲಯ ಎಂದು ಹೇಳುತ್ತಾರೆ. ಇದರ ಪಶ್ಚಿಮಕ್ಕೆ ರಾಣಿಯರ ಈಜುಕೊಳ ಮತ್ತು ಸ್ನಾನಗೃಹವಿದೆ. ಕಾಳಹಸೇಶ್ವರ ದೇವಾಲಯದ ಮುಂದೆ ವಸಂತಕಾಲದಲ್ಲಿ ರಾಣಿಯರು ವಿಶ್ರಾಂತಿ ಪಡೆಯಲು ಅರಮನೆಯನ್ನು ಕಟ್ಟಿಸಿದ್ದಾರೆ. ಯಲ್ಲಪ್ಪನಾಯಕನ ಹೊಸಕೋಟೆ, ದೇವರಬೆಟ್ಟ, ಬಂಗಾರನಾಯಕನ ಬೆಟ್ಟ, ಕನ್ನಮೇಡಿ ಕೋಟೆಗಳಲ್ಲಿ ಅರಮನೆಯ ಕಟ್ಟಡಗಳು ಸಂಪೂರ್ಣವಾಗಿ ಹಾಳಾಗಿವೆ.

### ೪. ಸೈನಿಕರ ನಿವಾಸಗಳು

ಕೋಟೆಯ ರಕ್ಷಣೆಗಾಗಿ ಸೈನಿಕರ ಅವಶ್ಯಕತೆ ಹೆಚ್ಚಿರುತ್ತದೆ. ಆದ್ದರಿಂದ ಇವರು ಉಳಿದುಕೊಳ್ಳಲು ವಸತಿಗಳನ್ನು ನಿರ್ಮಿಸಬೇಕು. ವೀರಭದ್ರನ ಮತ್ತು ಬೆಸ್ತರ ಕೋಟೆಯ ಸುತ್ತುಗಳಲ್ಲಿ ಸೈನಿಕರ ನಿವೇಶನದ ತಳಪಾಯಗಳು ಹೇರಳವಾಗಿವೆ. ಆದರೆ ಅದರ ಕಟ್ಟಡ ಭಾಗ ಮಾತ್ರ ಸಂಪೂರ್ಣವಾಗಿ ಹಾಳಾಗಿವೆ. ಕೋಟೆಯ ಕಾವಲು ಕಾಯುವ ಸೈನಿಕರಿಗೆ ಜೀವನಾವಶ್ಯಕ್ಕಾಗಿ ಸ್ವಲ್ಪ ಜಮೀನನ್ನು ಪಾಳೆಯಗಾರರು ನೀಡಿದ್ದರು ಎಂದು ಹೇಳುತ್ತಾರೆ. ಈಗಲೂ ಆ ಭೂಮಿಯನ್ನು ಕೋಟೆಯ ಮಾನ್ಯ ಎಂದು ಸ್ಥಳೀಯರು ಕರೆಯುತ್ತಾರೆ.

ಅದೇ ರೀತಿ ವೈ. ಎನ್. ಹೊಸಕೋಟೆ, ದೇವರಬೆಟ್ಟ, ಕನ್ನಮೇಡಿ, ಬಂಗಾರ ನಾಯಕನ ಬೆಟ್ಟದಲ್ಲಿ ಸೈನಿಕರ ನಿವಾಸಗಳು ಕೇವಲ ತಳಪಾಯವನ್ನು ಮಾತ್ರ ಹೊಂದಿದ್ದು ಕಟ್ಟಡದ ಭಾಗ ನಾಶವಾಗಿವೆ. ಈ ಕಟ್ಟಡಗಳು ಆಯತಾಕಾರದ ತಲವಿನ್ಯಾಸವನ್ನು ಹೊಂದಿವೆ.

### ೫. ಮದ್ದಿನ ಮನೆಗಳು

ಸಾಮಾನ್ಯವಾಗಿ ಫಿರಂಗಿ ಮತ್ತು ಬಂದೂಕುಗಳಿಗೆ ಬೇಕಾಗುವ ಮದ್ದನ್ನು ಚಳಿ ಮತ್ತು ಬಿಸಿಲಿನಿಂದ ಸಂರಕ್ಷಿಸಲು ಉತ್ತಮ ಹವಾಮಾನದಲ್ಲಿ ಇಡಬೇಕಾಗುತ್ತದೆ. ಆದ್ದರಿಂದ ಇವುಗಳ ನಿರ್ಮಾಣಕ್ಕೆ ಹೆಚ್ಚು ಆದ್ಯತೆ ನೀಡುತ್ತಿದ್ದರು. ನಿಡುಗಲ್ಲಿನಲ್ಲಿನ ಕೆಲವು ಮದ್ದಿನ ಮನೆಗಳು ಈಗಲೂ ಸುಭದ್ರವಾಗಿವೆ. ಕಾಳಹಸ್ತೇಶ್ವರನ ಕೋಟೆ ಮತ್ತು ವೀರಭದ್ರನ ಕೋಟೆಯಲ್ಲಿ ಹಲವು ಮದ್ದಿನ ಮನೆಗಳಿವೆ. ವೀರಭದ್ರನ ಕೋಟೆಯಲ್ಲಿರುವ ಮದ್ದಿನ ಮನೆಗಳು ಸಂಪೂರ್ಣವಾಗಿ ಹಾಳಾಗಿವೆ. ಕಾಳಹಸ್ತೇಶ್ವರನ ಕೋಟೆಯ ದ್ವಾರದ ಈಶಾನ್ಯ ದಿಕ್ಕಿನಲ್ಲಿ ಫಿರಂಗಿಗಳಿರುವುದರಿಂದ ಅವುಗಳಿಗೆ ಬೇಕಾದ ಮದ್ದುಗುಂಡುಗಳನ್ನು ಈ ಮನೆಗಳಲ್ಲಿ ಸಂಗ್ರಹಿಸುತ್ತಿದ್ದರು. ಯಲ್ಲಪ್ಪನಾಯಕನ ಹೊಸಕೋಟೆಯಲ್ಲಿಯು ಚನ್ನಕೇಶವ ದೇವಾಲಯದ ದಕ್ಷಿಣ ದಿಕ್ಕಿಗೆ ಮದ್ದಿನ ಮನೆಗಳಿವೆ. ಬಂಗಾರ ನಾಯಕನಬೆಟ್ಟ, ದೇವರಬೆಟ್ಟ, ಕನ್ನಮೇಡಿ ಕೋಟೆಗಳಲ್ಲಿ ಮದ್ದಿನ ಮನೆಗಳು ಸಂಪೂರ್ಣವಾಗಿ ಹಾಳಾಗಿವೆ.

೬. ತುಪ್ಪದ ಕಣಜಗಳು.

ನಿಡುಗಲ್ಲಿನ ಭೈರವನ ಕೋಟೆಯಲ್ಲಿ ಅರಮನೆಯ ಈಶಾನ್ಯ ದಿಕ್ಕಿನಲ್ಲಿ ೪ ವೃತ್ತಾಕಾರದ ಭೂಮಿಯ ಒಳಭಾಗದಲ್ಲಿ ಗಾರೆಯಿಂದ ನಯಮಾಡಿದ ತುಪ್ಪದ ಕೊಳಗಳಿವೆ. ಇವು ಸುಮಾರು ೮ರಿಂದ ೧೦ ಅಡಿ ಆಳವಾಗಿವೆ. ವಸಂತ ಋತುವಿನ ಅರಮನೆಯ ಬಲಬದಿಯಲ್ಲಿ ಚೌಕಾಕಾರದ ಕಟ್ಟಡದ ಒಳಗೆ ಗಾರೆಯಿಂದ ನಯಮಾಡಿದ ಎರಡು ತುಪ್ಪದ ಕಣಜಗಳಿವೆ. ಕನ್ನಮೇಡಿಯ ಗುಜ್ಜಾರಪ್ಪನ ಬೆಟ್ಟದಲ್ಲಿ ತುದಿಯ ಭಾಗದ ಕೊತ್ತಲಿನ ಒಳಭಾಗದಲ್ಲಿ ನಯಮಾಡಿದ ಗಾರೆಯ ಆಯತಾಕಾರದ ತುಪ್ಪದ ಕಣಜಗಳಿವೆ. ಯಲ್ಲಪ್ಪನಾಯಕನ ಹೊಸಕೋಟೆಯ ತುದಿಯ ಭಾಗದಲ್ಲಿ ಚನ್ನಕೇಶವ ದೇವಾಲಯದ ಹಿಂದೆ ಆಯತಾಕಾರದ ಕಟ್ಟಡದ ಒಳಭಾಗದಲ್ಲಿ ಗಾರೆಯಿಂದ ನಯಮಾಡಿದ ಎರಡು ತುಪ್ಪದ ಕಣಜಗಳಿವೆ. ದೇವರಬೆಟ್ಟ ಮತ್ತು ಬಂಗಾರನಾಯಕನ ಬೆಟ್ಟದಲ್ಲಿ ತುಪ್ಪದ ಕಣಜಗಳ ಕಟ್ಟಡಗಳು ಹಾಳಾಗಿವೆ. ಇವುಗಳಲ್ಲಿ ಸಂಗ್ರಹಿಸಿದ ತುಪ್ಪವನ್ನು ಫಿರಂಗಿಗಳು ಮತ್ತು ಬಂದೂಕುಗಳಿಗೆ ಮದ್ದುಗುಂಡುಗಳನ್ನು ಉಪಯೋಗಿಸಲು ಬಳಸುತ್ತಿದ್ದರು.

೭. ನೀರಿನ ಸಂಗ್ರಹಣೆ

ನೀರಿನ ಸಂಗ್ರಹಣೆಗೆ ನಿಡುಗಲ್ಲು ಪಾಳೆಯಗಾರರು ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದರು. ನಿಡುಗಲ್ಲು ಗಿರಿದುರ್ಗವಾಗಿರುವುದರಿಂದ ನೀರು ಹರಿಯುವ ಕಡೆಗೆ ಅಡ್ಡಗೋಡೆ ಕಟ್ಟಿ ಬಾವಿ, ಪುಷ್ಕರಣೆಗಳನ್ನು ನಿರ್ಮಿಸಿದ್ದಾರೆ. ಕಾಳಹಸ್ತೇಶ್ವರನ ದೋಣೆಯನ್ನು ಗಾರೆ ಮತ್ತು ಇಟ್ಟಿಗೆಯಿಂದ ಬಿರುಬೇಸಿಗೆಯಲ್ಲು ನೀರು ಇರುವಂತೆ ಕಟ್ಟಿಸಿದ್ದಾರೆ. ಅರಮನೆಯ ಆವರಣದ ದಕ್ಷಿಣಕ್ಕೆ ಆನೆಯಹೊಂಡ ಇದ್ದು ಇದಕ್ಕೆ ಬೆಟ್ಟದಲ್ಲಿ ಹರಿಯುವ ಮಳೆಯ ನೀರು ಒಳಚರಂಡಿಗಳ ಮೂಲಕ ಹರಿಯುವಂತೆ ವ್ಯವಸ್ಥೆಯನ್ನು ಮಾಡಿದ್ದಾರೆ. ಇದರ ಒಂದು ಬದಿಯಲ್ಲಿ ಕೋಟೆಗೋಡೆಯಿದ್ದು ಆಳವಾದ ಕಂದಕದಂತೆ ಆನೆ ಹೊಂಡವಿದ್ದು ಇದನ್ನು ಕಂದಕವಾಗಿಯೂ, ನೀರಿನ ಬಳಕೆಯ ಉಪಯೋಗಕ್ಕೆ ಬರುವಂತೆ ನಿರ್ಮಿಸಿದ್ದಾರೆ. ವೀರಭದ್ರನ ಕೋಟೆಯಲ್ಲಿ ವಜ್ರದ ಊರಬಾಗಿಲ ಬಳಿ ಆರು ಬಾವಿಗಳು, ರಂಗವೇಗಿ ಬಾವಿ, ಪಾರ್ಶ್ವನಾಥ ದೇವಾಸ್ಥಾನದ ಈಶಾನ್ಯಕ್ಕಿರುವ ಸೀಗೆಬಾವಿಗಳಿವೆ. ಸೀಗೆ ಬಾವಿಯು ಗಾರೆ, ಕಲ್ಲು ಮತ್ತು ಇಟ್ಟಿಗೆಯಿಂದ ನಿರ್ಮಾಣವಾಗಿವೆ.

ಚಿಕ್ಕಪ್ಪಯ್ಯನ ಮಠದ ವಾಯುವ್ಯ ದಿಕ್ಕಿನಲ್ಲಿ ಗಾರೆ ಚಿಲುಮೆಯಿದ್ದು ಇದು ಸಂಪೂರ್ಣವಾಗಿ ಗಾರೆಯಿಂದ ಕೂಡಿದ್ದರೂ ಚಿಲುಮೆಗೆ ನೀರು ಯಾವ ಕಡೆಯಿಂದ ಬರುವುದೋ ಆಶ್ಚರ್ಯವಾಗುತ್ತದೆ.

ರಾಮಲಿಂಗೇಶ್ವರ ದೇವಾಲಯದ ಬಳಿ ರಾಮತೀರ್ಥ, ಇದರ ಪಶ್ಚಿಮಕ್ಕೆ ಲಕ್ಷ್ಮಣತೀರ್ಥ ಪುಷ್ಕರಣೆಗಳಿವೆ. ಈಶ್ವರ ದೇವಾಲಯದ ಬಳಿ ಇರುವ ಕಲ್ಯಾಣಿಯಲ್ಲಿ ನಂದಿ ಮತ್ತು ಶಿವಲಿಂಗದ

ಉಬ್ಬುಶಿಲ್ಪಗಳಿವೆ. ಗಡ್ಡದಯ್ಯನ ಮಠದ ಬಳಿ ವಿಶಾಲ ಕಲ್ಯಾಣಿಯಿದೆ. ಸಾರಟೇಶ್ವರ ದೇವಾಲಯದ ಶಿವಲಿಂಗಕ್ಕೆ ನೀರಿನ ಅಭಿಷೇಕ ಮಾಡಿಸಲು ಬಾವಿ ಮತ್ತು ಈ ದೇವಾಲಯವನ್ನು ಹೊಟ್ಟೆಣ್ಣನಾಯಕನು ಕಟ್ಟಿಸಿದನು ಎಂದು ಈ ದೇವಾಲಯದ ಶಾಸನ ತಿಳಿಸುತ್ತದೆ.*

ಅದೇ ರೀತಿ ದೇವರ ಬೆಟ್ಟದಲ್ಲಿ ತುದಿಯ ಭಾಗದಲ್ಲಿ ಒಂದು ಗಾರೆ ಚಿಲುಮೆ ಅದರ ಕೆಳಭಾಗದಲ್ಲಿ ಒಂದು ದೋಣಿಯಿದೆ. ಯಲ್ಲಪ್ಪನಾಯಕನ ಹೊಸಕೋಟೆಯಲ್ಲಿ ಸಿದ್ಧರ ಜಲಾಶಯ, ಎಮ್ಮೆದೋಣಿ, ಕುದುರೆ ಮತ್ತು ಆನೆಯ ದೋಣಿ, ದೇವಸ್ಥಾನದ ದೋಣಿಗಳನ್ನು ಕಲ್ಲಿನ ಕೊರಕಲು ಮತ್ತು ತಗ್ಗಿನ ಪ್ರದೇಶದಲ್ಲಿ ಮಳೆಯ ನೀರು ಹರಿದು ಹೋಗದಂತೆ ಕಲ್ಲು ಮತ್ತು ಮಣ್ಣಿನ ಕಟ್ಟೆಗಳನ್ನು ನಿರ್ಮಿಸಿದ್ದಾರೆ. ಒಂದು ದೋಣಿಯನ್ನು ಮಾತ್ರ ಗಾರೆ ಮತ್ತು ಇಟ್ಟಿಗೆಯಿಂದ ನಿರ್ಮಾಣ ಮಾಡಿದ್ದಾರೆ. ಕನ್ನಮೇಡಿ ಕೋಟೆಯಲ್ಲಿ ದಕ್ಷಿಣ ಬೆಟ್ಟದಲ್ಲಿ ಗಾರೆ ಮತ್ತು ಇಟ್ಟಿಗೆಯಿಂದ ನಿರ್ಮಿಸಿದ ಎರಡು ದೋಣಿಗಳಿವೆ. ಮಧ್ಯಭಾಗದಲ್ಲಿ ಚಿರತೆದೋಣಿಯಿದೆ. ಕೋಟೆದೋಣಿಗೆ ಒಂದು ಬದಿಯಲ್ಲಿ ಕೋಟೆಯ ಗೋಡೆಯಿದ್ದು ವಿಶಾಲವಾದ ಜಾಗವನ್ನು ಹೊಂದಿದೆ. ಇದರ ಮೇಲ್ಭಾಗದಲ್ಲಿ ಗಂಗಮ್ಮ ದೋಣಿಯಿದೆ. ಬಂಗಾರನಾಯಕನ ಬೆಟ್ಟದಲ್ಲಿ ನೈಸರ್ಗಿಕ ಚಿಲುಮೆಗಳೇ ಹೆಚ್ಚಾಗಿವೆ. ವೃತ್ತಾಕಾರದ ಬಾವಿ, ಗುರದೋಣಿ, ರಾಮಪ್ಪನ ದೋಣಿ, ಹೂವಿನ ದೋಣಿ, ಹೊಸದೋಣಿ, ಮೊದಲಾದವು ಕೋಟೆಗೆ ನೀರಿನ ಆಸರೆಯಾಗಿದ್ದವು.

ಸಾಮಾನ್ಯವಾಗಿ ಕೋಟೆಯ ಒಳಗೆ ನೀರಿನ ಸಂಗ್ರಹಣೆ ಇಲ್ಲದಿದ್ದರೆ ಕೋಟೆಯು ಶತ್ರುಗಳಿಗೆ ಬಹುಬೇಗ ವಶವಾಗುವ ಸಾಧ್ಯತೆಯಿರುತ್ತದೆ. ಆದ್ದರಿಂದ ಎಲ್ಲಾ ಕೆಲಸ ಕಾರ್ಯಗಳಿಗೆ ನೀರು ಬೇಕಾಗಿರುವುದರಿಂದ ನೀರಿನ ಸಂಗ್ರಹಣೆಗೆ ಹೆಚ್ಚು ಆದ್ಯತೆ ನೀಡುತ್ತಿದ್ದರು.

**೮. ಕಣಜಗಳು.**

ಸಾಮಾನ್ಯವಾಗಿ ಕಣಜಗಳು ಧಾನ್ಯ, ತುಪ್ಪ ಮೊದಲಾದ ಪದಾರ್ಥಗಳನ್ನು ಮಳೆ, ಬಿಸಿಲು ಮತ್ತು ಚಳಿಯಿಂದ ರಕ್ಷಿಸಲು ಉತ್ತಮ ಹವಾಮಾನವಿರುವ ಕಡೆ ನಿರ್ಮಾಣ ಮಾಡಲ್ಪಟ್ಟಿರುತ್ತದೆ.

ನಿಡುಗಲ್ಲಿನಲ್ಲಿ ಅಕ್ಕಿಯನ್ನು ಸಂಗ್ರಹಿಸುತ್ತಿದ್ದರು ಎನ್ನುವ ಕಟ್ಟಡ ಅರಮನೆಯ ಪಶ್ಚಿಮ ದಿಕ್ಕಿಗೆ ಇದೆ. ಇದು ಆಯತಾಕಾರದ ಕಟ್ಟಡವಾಗಿದ್ದು ಸಣ್ಣ ಸಣ್ಣ ಸೈಜುಗಲ್ಲುಗಳನ್ನು ಬಳಸಿಕೊಂಡು ನಿರ್ಮಿಸಲಾಗಿದೆ. ಒಳಭಾಗದಲ್ಲಿ ಗಾರೆಯನ್ನು ಬಳಸಿದ್ದಾರೆ. ದೇವರಬೆಟ್ಟ, ಹೊಸಕೋಟೆ, ಬಂಗಾರ ನಾಯಕನ ಬೆಟ್ಟ ಕನ್ನಮೇಡಿ ಕೋಟೆಗಳಲ್ಲಿ ಧಾನ್ಯ ಸಂಗ್ರಹಣೆ ಕಣಜ (ಉಗ್ರಾಣ)ದ ಕಟ್ಟಡಗಳಿವೆ. ಆದರೆ ಅವು ಹಾಳಾಗಿದ್ದು ತಳಪಾಯ ಮಾತ್ರಉಳಿದಿದೆ. ಸಾಮಾನ್ಯವಾಗಿ ಈ ಕಣಜಗಳಲ್ಲಿ ಬರಗಾಲ, ಯುದ್ಧದಂತಹ ತುರ್ತು ಸಮಯದಲ್ಲಿ ಬಳಕೆಗಾಗಿ ಆಹಾರ

ಪದಾರ್ಥಗಳನ್ನು ಸಂಗ್ರಹಿಸುತ್ತಿದ್ದರು. ನಿಡುಗಲ್ಲು ಕೋಟೆಯಲ್ಲಿ ಆಹಾರ ಪದಾರ್ಥಗಳ ಕಣಜಗಳು ಹೆಚ್ಚಿನ ಪ್ರಮಾಣದಲ್ಲಿದ್ದುದರಿಂದ ಮೊಗಲರ ಸೇನೆ ಸಿದ್ದಪ್ಪ ಮತ್ತು ಲಿಂಗಣ್ಣ ಎಂಬುವವರ ನೇತೃತ್ವದಲ್ಲಿ ದಾಳಿ ಮಾಡಿದಾಗ ಆಹಾರ ಪದಾರ್ಥಗಳ ಕೊರತೆಯುಂಟಾಗದೆ ಮೂರು ವರ್ಷಗಳವರೆಗೆ ಕೋಟೆಯ ಬಾಗಿಲನ್ನು ತೆರೆದಿರಲಿಲ್ಲವಂತೆ.[೬]

೯. ತೋಪುಗಳು

ನಿಡುಗಲ್ಲಿಗೆ ವಿಜಯನಗರ ಮತ್ತು ಮೊಗಲರ ಸೇನೆ ಮುತ್ತಿಗೆ ಹಾಕಿದಾಗ ಕೋಟೆಯು ಬೇಗ ಶರಣಾಗತವಾಗದಿರುವುದಕ್ಕೆ ಫಿರಂಗಿಪಡೆಯು ಕಾರಣವಾಗಿತ್ತು. ಈಗ ನಿಡುಗಲ್ಲಿನಲ್ಲಿ ಎರಡು ಫಿರಂಗಿಗಳು ಮಾತ್ರ ಉಳಿದಿವೆ. ಇವು ೧೮ ಅಡಿ ಉದ್ದ ೧ ಅಂಗುಲವ್ಯಾಸ ಮತ್ತು ೮ ಅಡಿ ಉದ್ದ ೧ ಅಂಗುಲ ವ್ಯಾಸವನ್ನು ಹೊಂದಿವೆ. ದೊಡ್ಡ ಫಿರಂಗಿಯನ್ನು ಸ್ಥಳೀಯವಾಗಿ ಏಳುಮಕ್ಕಳ ತಾಯಿ ಎಂದು ಕರೆಯುವರು. ಅಂದರೆ ಒಮ್ಮೆ ಕೋಟೆಕಾಳಗದ ಸಮಯದಲ್ಲಿ ಏಳುಮಕ್ಕಳನ್ನು ಹಡೆದ ಒಬ್ಬ ಹೆಂಗಸು ಫಿರಂಗಿಯನ್ನು ಭುಜದ ಮೇಲಕ್ಕೆ ಎತ್ತಿಕೊಂಡು ಶತ್ರುಗಳಿಗೆ ಮದ್ದುಗುಂಡನ್ನು ಹೊಡೆದಳೆಂಬ ಪ್ರತೀತಿಯಿದೆ.

ಫಿರಂಗಿಯ ಬಗ್ಗೆ ಜನಪದ ಸಾಹಿತ್ಯದಲ್ಲಿ ಹೈದರ್-ಟಿಪ್ಪು ನಿಡುಗಲ್ಲಿನ ಮುತ್ತಿಗೆಗೆ ಬಂದಾಗ ನಿಡುಗಲ್ಲಿನ ಪಾಳೆಯಗಾರರು ಫಿರಂಗಿಯ ಪಡೆಗೆ ಹೇಳುವ ಮಾತುಗಳನ್ನು ವರ್ಣಿಸಲಾಗಿದೆ.

> ಮುಮ್ಮಡಿ ಬರುವಾಗ ದೊಡ್ಡ ಫಿರಂಗಿ ।
> ನಿಲ್ಲಿಸ್ಯಾರೋ ಸೀರ್‍ಯದ ತುರುಕರು ॥
> ದೊಡ್ಡಾನೆ ಫಿರಂಗಿನಿಲ್ಲಿಸ್ಯಾರೋ ಮುಮ್ಮಡಿ ।
> ಕುಸ್ತಿಗೆ ಬಾರೆಂದು ಕರೆದರೋ ॥[೮]

೧೦. ಗರಡಿ ಮನೆಗಳು

ಸಾಮಾನ್ಯವಾಗಿ ಗರಡಿ ಮನೆಗಳನ್ನು ನಿರ್ಮಿಸುವುದು ರಾಜನು, ಸೈನಿಕರು ವಿವಿಧ ಕಸರತ್ತು ಮಾಡಲಿಕ್ಕಾಗಿ ತಮ್ಮ ಶಕ್ತಿ ಸಾಮಾರ್ಥ್ಯವನ್ನು ಕಾಪಾಡಿಕೊಂಡು ಯುದ್ಧರಂಗದಲ್ಲಿ ಹೋರಾಡಲು ಶಕ್ತಿಯುತವಾಗಿರಬೇಕೆಂಬ ಉದ್ದೇಶಕ್ಕಾಗಿ ಗರಡಿಮನೆಗಳನ್ನು ನಿರ್ಮಿಸುತ್ತಿದ್ದರು. ನಿಡುಗಲ್ಲಿನಲ್ಲಿ ಕಾಳಹಸ್ತೇಶ್ವರ ದೇವಾಲಯದ ಬಲಬದಿಯಲ್ಲಿ ಗರಡಿಮನೆಯಿದ್ದು ಆಯತಾಕಾರವಾಗಿದೆ. ಇದು ನಾಲ್ಕು ಕೋಣೆಗಳಿಂದ ಕೂಡಿದ್ದು ಒಂದು ಕೋಣೆಯು ೬೦ ಅಡಿ ಉದ್ದವಾಗಿದ್ದು ೧೦ ಅಡಿ ಅಗಲವಿದೆ. ಮೇಲ್ಭಾಗದಲ್ಲಿ ಗಾಳಿ ಬೆಳಕಿಗೆ ಮೂರು ರಂಧ್ರಗಳನ್ನು ಕೊರೆಯಲಾಗಿದೆ. ಈ ಕೋಣೆಯಲ್ಲಿ ಕಸರತ್ತು ನಡೆಸಿ ಇದರ ಪೂರ್ವಕ್ಕಿರುವ

ಕಾಳಹಸ್ತೇಶ್ವರ ದೊಣೆಯಲ್ಲಿ ಸ್ನಾನಮಾಡಿ ಕಾಳಹಸ್ತೇಶ್ವರನ ದರ್ಶನ ಪಡೆಯುತ್ತಿದ್ದರೆಂದು ಹೇಳುತ್ತಾರೆ. ಈ ಗರಡಿ ಮನೆಯ ಒಳಭಾಗವನ್ನು ಗಾರೆಯಿಂದ ನಯಗೊಳಿಸಿದ್ದು ಹೊರಭಾಗಕ್ಕೆ ಸಣ್ಣ ಸೈಜುಕಲ್ಲು ಮತ್ತು ಮಣ್ಣನ್ನು ಬಳಸಿ ನಿರ್ಮಿಸಿದ್ದಾರೆ. ಕೆಲವು ಕಟ್ಟಡಗಳಿಗೆ ಒಂದೇ ಕಿಂಡಿಯಿದ್ದು ಅದರ ಮೂಲಕ ಒಳಹೋಗಿ ಸೈನಿಕರು ಕಸರತ್ತು ಮಾಡುತ್ತಿದ್ದರು. ದೇವರಬಟ್ಟ, ಯಲ್ಲಪ್ಪನಾಯಕನ ಬೆಟ್ಟ, ಬಂಗಾರನಾಯಕನ ಬಟ್ಟ, ಕನ್ನಮೇಡಿ ಕೋಟೆಗಳಲ್ಲಿ ಗರಡಿ ಮನೆಗಳು ಇದ್ದವೆಂಬುದಕ್ಕೆ ಪೂರ್ಣಪ್ರಮಾಣದ ಯಾವ ಕಟ್ಟಡದ ಅವಶೇಷಗಳು ದೊರೆಯುವುದಿಲ್ಲ.

೧೧. ಕೋಟೆಯ ಭಿತ್ತಿಶಿಲ್ಪಗಳು.

ಕೋಟೆಯನ್ನು ನಿರ್ಮಿಸುವಾಗ ಗೋಡೆಯ ಮೇಲೆ ಯಾವ ಶಿಲ್ಪಗಳಿರಬೇಕು ಎಂಬುದರ ಬಗ್ಗೆ ವಿಶ್ವಕರ್ಮ ವಾಸ್ತುಶಿಲ್ಪದಲ್ಲಿ ತಿಳಿಯ ಬಹುದಾಗಿದೆ. ನಿಡುಗಲ್ಲು ಕೋಟೆಯ ಭಿತ್ತಿಯ ಮೇಲೆ ಆನೆ, ಸಿಂಹ, ಹುಲಿ, ಕೂರ್ಮ, ವೃಶ್ಚಿಕ, ಲಜ್ಜಾಗೌರಿ, ಯುದ್ಧಕ್ಕೆ ಹೊರಟಿರುವ ರಥದಶಿಲ್ಪ, ಸ್ತ್ರೀ ಪುರಷರ ವಿವಿಧ ಭಂಗಿಗಳು, ಸೀಗಲ ಗುಡ್ಡದ ಕೋಟೆ ಗೋಡೆಯಲ್ಲಿ ಮನುಷ್ಯರ ಮತ್ತು ಪ್ರಾಣಿಗಳ ವಿವಿಧ ಮಿಥುನ ಶಿಲ್ಪಗಳನ್ನು ಚಿತ್ರಿಸಿದ್ದಾರೆ. ಸಿಂಹ ಮತ್ತು ಹುಲಿ ಪ್ರಾಣಿಗಳ ಈ ಪ್ರದೇಶವು ಸಂಕೇತಗಳು ಕಾಡುಮೃಗಗಳಿಂದ ಕೂಡಿದೆ ಎಂಬುದನ್ನು ಶತ್ರುಗಳಿಗೆ ತಿಳಿಯುವಂತೆ ಮಾಡಿ ಅವರಲ್ಲಿ ಭಯದ ವಾತಾವರಣವನ್ನು ಹುಟ್ಟಿಸುವುದಾಗಿತ್ತು. ಆನೆಯ ಶಿಲ್ಪ ಗಜಸೇನೆಯಿಂದಲೂ ವಶಪಡಿಸಿಕೊಳ್ಳಲಾಗದಂತಹ ಅಬೇಧ್ಯತೆ ಹೊಂದಿದೆ ಎಂಬುದನ್ನು ಸೂಚಿಸುತ್ತದೆ. ಕೂರ್ಮದ  ಶಿಲ್ಪವು ಕೂರ್ಮಕ್ಕೆ ೧೦೦೦ ವರ್ಷ ಆಯಸ್ಸು ಇರುವುದರಿಂದ ಕೋಟೆಯು ಸಹ ಸಾವಿರಾರು ವರ್ಷ ಶಾಶ್ವತವಾಗಿರುತ್ತದೆಂಬುದು, ಅಲ್ಲದೆ ಕೂರ್ಮದ ಮೇಲ್ಭಾಗದಲ್ಲಿರುವ ಚಿಪ್ಪು ಬಲಿಷ್ಟವಾಗಿದ್ದು ಕಲ್ಲಿನಿಂದ ಹೊಡೆದರು ಹಾಳಾಗುತ್ತಿರಲಿಲ್ಲ ಆದ್ದರಿಂದ ಕೋಟೆಗೆ ಯಾವ ರೀತಿ ದಾಳಿ ಮಾಡಿದರೂ ಹಾಳಾಗುವುದಿಲ್ಲ ಎಂಬುದನ್ನು ಸಂಕೇತಿಸುತ್ತದೆ. ಅದೇ ರೀತಿ ವೃಶ್ಚಿಕದ ಶಿಲ್ಪವು ವೃಶ್ಚಿಕದ ಎರಡು ಕೊಂಡಿಗಳನ್ನು ಸ್ಪರ್ಶಿಸಿದರೆ ಯಾವ ರೀತಿ ವಿಷ ಏರುತ್ತದೋ ಅದೇ ರೀತಿ ಕೋಟೆಯ ಒಳಪ್ರವೇಶಿಸಿದರೆ ಕಾವಲು ಪಡೆಯು ಶತ್ರುಗಳ ಮೇಲೆರಗುತ್ತದೆ. ಎಂಬುದನ್ನು ಸೂಚಿಸುತ್ತದೆ. ಕೆಲವು ಕಡೆ ಕೋಟೆಯ ಗೋಡೆಯು ಮಳೆ ನೀರಿನಿಂದ ಹಾಳಾಗಬಾರದೆಂದು ಗಾರೆಯ ಇಳಿವೂರೆಗಳನ್ನು ನಿರ್ಮಿಸಿದ್ದಾರೆ ಹಾಗೂ ಹೂಬಳ್ಳಿಗಳ ಲತಾಪಟ್ಟಿಯನ್ನು ಚಿತ್ರಿಸಿದ್ದಾರೆ. ಕೋಟೆಯ ದ್ವಾರಗಳಲ್ಲಿ ಕೀರ್ತಿಮುಖ ಮತ್ತು ವ್ಯಾಘ್ರಮೂಖಗಳನ್ನು ಚಿತ್ರಿಸಿದ್ದು, ಶತ್ರುಗಳಿಗೆ ಇವು ಭಯದ ವಾತಾವರಣವನ್ನು, ಕೋಟೆಯ ಅಬೇಧ್ಯತೆಯನ್ನು ಸೂಚಿಸುತ್ತವೆ. ದೇವರಬೆಟ್ಟ, ಯಲ್ಲಪ್ಪನಾಯಕನ ಹೊಸಕೋಟೆ, ಬಂಗಾರನಾಯಕನ ಬೆಟ್ಟ, ಕನ್ನಡಮೇಡಿಯ ಕೋಟೆಗಳಲ್ಲಿ ಕೋಟೆಯ ಮೇಲಿನ ಭಿತ್ತಿಶಿಲ್ಪಗಳು ಕಾಣಬರುವುದಿಲ್ಲ. ನಿಡುಗಲ್ಲಿನ ಸೀಮಲಯ್ಯನ ದೇವಾಲಯದ ಭಿತ್ತಿಯಲ್ಲಿ ಲತಾಪಟ್ಟಿಕೆಗಳಿವೆ. ಯಲ್ಲಪ್ಪನಾಯಕನ ಹೊಸಕೋಟೆಯ

ಚನ್ನಕೇಶವ ದೇವಾಲಯದ ಭಿತ್ತಿಯಲ್ಲಿ ಮನುಷ್ಯನನ್ನು ತಿನ್ನುತ್ತಿರುವ ಸಿಂಹದ ಶಿಲ್ಪ ಕೋಟೆಯು ಅಭೇಧ್ಯವಾಗಿದ್ದು, ಶತ್ರುಗಳಿಗೆ ಕಾಡುಮೃಗಗಳಿವೆ ಎಂಬುದನ್ನು ಸೂಚಿಸುತ್ತದೆ. ಆನೆ, ಕುದುರೆಯ ಶಿಲ್ಪವು ಗಜಪಡೆ ಮತ್ತು ಅಶ್ವಪಡೆಗಳಿಗೂ ಶರಣಾಗದ ಬಲಿಷ್ಠಕೋಟೆ ಎಂಬುದನ್ನು ಸೂಚಿಸುತ್ತದೆ. ನಾಗಶಿಲ್ಪ ಶತ್ರುಗಳು ದಾಳಿ ಮಾಡಿದಾಗ ನಾಗರ ಹಾವಿನಷ್ಟು ವಿಷಕಾರಕ ಉರಗಗಳಿವೆ ಎಂಬುದನ್ನು ಸಂಕೇತಿಸುತ್ತಾ ಶತೃಗಳಲ್ಲಿ ಭಯದ ವಾತಾವರಣ ಮೂಡಿಸುವುದಾಗಿತ್ತು. ನಾಗಶಿಲ್ಪ ಸುಬ್ರಮಣ್ಯನ ಆರಾಧನೆಯಿತ್ತು. ಎಂಬುದನ್ನು ತಿಳಿಸುತ್ತದೆ. ಮತ್ಸ್ಯಶಿಲ್ಪವು ಶತ್ರುಗಳು ಯಾವ ರೀತಿಯ ಬಲೆಯನ್ನು ಬೀಸಿದರೂ ತಪ್ಪಿಸಿಕೊಳ್ಳುವಂತಹ ಚಾಣಾಕ್ಷತೆ ಸೈನಿಕರಿಗಿತ್ತು ಎಂಬುದನ್ನು ಸೂಚಿಸುತ್ತದೆ. ಅದೇ ರೀತಿ ನಂದಿ, ಹಂಸಗಳ ಪಟ್ಟಿಕೆ, ಹೂಬಳ್ಳಿಗಳ ಶಿಲ್ಪ ಮೊದಲಾದವು ಚೆನ್ನಕೇಶವ ದೇವಾಲಯದಲ್ಲಿ ಚಿತ್ರಿಸಲಾಗಿದೆ.

**೧೨. ಗೋಪುರಗಳು (ಕಾವಲು ಗೋಪುರ)**

ದೂರದಲ್ಲಿರುವ ಶತ್ರುಗಳ ಚಲನವಲನಗಳನ್ನು ವೀಕ್ಷಿಸುವ ಸಲುವಾಗಿ ಕೋಟೆಗಳಲ್ಲಿ ಗೋಪುರಗಳನ್ನು ನಿರ್ಮಿಸುತ್ತಿದ್ದರು. ನಿಡುಗಲ್ಲಿನಲ್ಲಿ ಅರಮನೆಯ ಆವರಣದಲ್ಲಿ ಬೃಹತ್ ಹೆಬ್ಬಂಡೆಯಿದ್ದು ಇದನ್ನು ಹತ್ತಲು ಮೆಟ್ಟಿಲುಗಳನ್ನು ಕೊರೆದಿದ್ದು ಮೇಲ್ಭಾಗದಲ್ಲಿ ಆಯತಾಕಾರದ ಕಟ್ಟಡವಿರುವುದರಿಂದ ಇದನ್ನು ಗೋಪುರವನ್ನಾಗಿ ಬಳಸುತ್ತಿದ್ದರು ಎಂದು ಹೇಳಬಹುದು. ಕೋಟೆ ಗೋಡೆಗಿಂತೆ ಕೊತ್ತಲಗಳು ಎತ್ತರವಾಗಿರುವುದರಿಂದ ಇವುಗಳನ್ನು ಸಹ ಗೋಪುರಗಳನ್ನಾಗಿ ಬಳಸಿರಬಹುದು ಎಂದು ಹೇಳಬಹುದು. ಈ ಪರಿಸರದ ಬೆಟ್ಟಗಳಲ್ಲಿ ನಿಡಿದಾದ ಬೃಹತ್ ಬಂಡೆಗಳಿರುವುದರಿಂದ ಇವುಗಳನ್ನು ಗೋಪುರಗಳನ್ನಾಗಿ ಬಳಸಿರುವುದರಲ್ಲಿ ಉತ್ಪ್ರೇಕ್ಷೆಯೇನಿರುವುದಿಲ್ಲ. ದೇವರ ಬೆಟ್ಟದಲ್ಲಿ ಎತ್ತರವಾದ ಗಾಳಿ ಗೋಪುರವಿದ್ದು ಇದನ್ನು ಎತ್ತರದ ಜಗತಿಯಲ್ಲಿ ನಾಲ್ಕು ಕಂಬಗಳ ಮೇಲೆ ನಿರ್ಮಾಣ ಮಾಡಲಾಗಿದೆ. ಈ ಗೋಪುರದಲ್ಲಿ ನಿಂತು ಶತ್ರುಗಳ ಚಲನವಲನಗಳನ್ನು ವೀಕ್ಷಿಸುತ್ತಿದ್ದರು. ಬಂಗಾರ ನಾಯಕನ ಬೆಟ್ಟದಲ್ಲಿಯೂ ಬೃಹತ್ ಕಲ್ಲುಗಳನ್ನು ಗೋಪುರಗಳನ್ನಾಗಿ ಉಪಯೋಗಿಸುತ್ತಿದ್ದರು. ಅಂತಹ ಪ್ರಮುಖವಾದ ಗುಂಡುಗಳನ್ನು ತಿಮ್ಮಪ್ಪನಗುಂಡು, ನವಿಲುಗುಂಡು, ರಾಮಪ್ಪಗುಂಡು, ಆಮಿದಾಲಗುಂಡು ಮೊದಲಾದ ಹೆಸರುಗಳಿಂದ ಕರೆಯುತ್ತಿದ್ದಾರೆ. ಈ ಗುಂಡುಗಳಿಗೆ ಮೇಲೇರಲು ಮೆಟ್ಟಿಲುಗಳನ್ನು ಕೊರೆದಿದ್ದಾರೆ. ಕನ್ನಮೇಡಿ ಕೋಟೆಯಲ್ಲಿಯೂ ಸಹ ಬೃಹತ್ ಬಂಡೆಗಳನ್ನೇ ಗೋಪುರಗಳನ್ನಾಗಿ ಬಳಸಿಕೊಂಡಿರುವುದನ್ನು ನೋಡಬಹುದಾಗಿದೆ.

ಹೀಗೆ ಒಂದು ಕೋಟೆಯು ಶತ್ರುಗಳಿಗೆ ಅಬೇಧ್ಯವಾಗಲು ಹಲವು ವಿಧದ ರಕ್ಷಣ ತಂತ್ರಗಳನ್ನು ಅಳವಡಿಸಿಕೊಂಡು ಕೋಟೆಯ ಅಂಗಭಾಗಗಳನ್ನು ನಿರ್ಮಿಸಿದಾಗ ಸಹಜವಾಗಿ ಕೋಟೆಯು ಅಬೇಧ್ಯ ವಾಗಿರಲು ಸಾಧ್ಯವಾಗುತ್ತದೆ.

### ಅಡಿಟಿಪ್ಪಣಿಗಳು

೧. ಲಕ್ಷ್ಮಣ್ ತೆಲಗಾವಿ (ಸಂ), ೨೦೦೬, ಚರಿತ್ರೆ ಅಧ್ಯಯನ ಸಂಪುಟ-೧, ಸಂಚಿಕೆ-೨, ಪುಟ-೬೨.

೨. ಪರಮಶಿವಮೂರ್ತಿ ಡಿ.ವಿ., ೧೯೯೬, ಸಂಶೋಧನೆಯ ಸಿರಿ, ಪುಟ-೧೨.

೩. ಕವಿತಾಕೃಷ್ಣ (ಸಂ), ೨೦೦೨, ಜಯಮಂಗಲಿ, ಪುಟ-೪೨.

೪. ಪರಮಶಿವಮೂರ್ತಿ ಡಿ.ವಿ., ಪೂರ್ವೋಕ್ತ, ಪುಟ-೨೪.

೫. ಎಪಿಗ್ರಾಫಿಯ ಕರ್ನಾಟಕ, ಸಂಪುಟ-೧೨, ಪಾವಗಡ-೫೯, ಕ್ರಿ.ಶ. ೧೬೮೦.

೬. ವಸು ಎಂ.ವಿ. (ಸಂ), ೨೦೦೧, ದಕ್ಷಿಣ ಕರ್ನಾಟಕದ ಅರಸುಮನೆತನಗಳು, ಪುಟ-೫೭.

೭. ಸಣ್ಣನಾಗಪ್ಪ, ೨೦೦೭, ನಿಡುಗಲ್ಲು ಶೂಲದ ಈರಣ್ಣ ಜನಪದ ಸಂಗ್ರಹ, ಪುಟ-೫೪, ೫೫.

## ಅಧ್ಯಾಯ – ೬

# ಸಮಾರೋಪ

ಪ್ರಸ್ತುತ ಸಂಪ್ರಬಂಧದಲ್ಲಿ ನಿಡಗಲ್ಲು ಪರಿಸರದ ರಕ್ಷಣಾ ವಾಸ್ತುಶಿಲ್ಪ ಎಂಬ ಶಿರ್ಷಿಕೆಯಡಿಯಲ್ಲಿ ನಿಡಗಲ್ಲು ಪರಿಸರದಲ್ಲಿ ಬರುವ ಕೋಟೆಗಳ ಬಗ್ಗೆ ಅಧ್ಯಯನ ಮಾಡಲಾಗಿದೆ. ಸಾಮಾನ್ಯವಾಗಿ ಕೋಟೆಗಳನ್ನು ರಾಜನು ತನ್ನ ಪರಿವಾರ ಮತ್ತು ರಾಜ್ಯವನ್ನು ರಕ್ಷಿಸುವ ಸಲುವಾಗಿ ಕೋಟೆಗಳನ್ನು ನಿರ್ಮಿಸುತ್ತಿದ್ದನು. ಆದರೆ ಅರಸು ಮನೆತನಗಳ ಅಥವಾ ಪಾಳೆಯಗಾರರ ಅಧಿಕಾರ ಪತನವಾದ ಮೇಲೆ ಕಾಲಾಂತರದಲ್ಲಿ ಕೋಟೆಗಳು ನಿರ್ಲಕ್ಷ್ಯಕ್ಕೊಳಗಾಗಿ ಅವಸಾನದ ಹಾದಿ ಹಿಡಿಯುತ್ತಿದ್ದವು. ನಿಡಗಲ್ಲು ಪರಿಸರದಲ್ಲಿ ಬರುವ ಇಂತಹ ನಿರ್ಲಕ್ಷಿತ ಕೋಟೆಗಳ ಬಗ್ಗೆ ಪ್ರಕಟಗೊಂಡ ಕೆಲವು ಲೇಖನ, ಗ್ರಂಥ, ಜಾನಪದ ಸಾಹಿತ್ಯ, ಐತಿಹ್ಯ ಮೊದಲಾದವುಗಳ ನೆರವಿನಿಂದ ಹಾಗೂ ಕ್ಷೇತ್ರಕಾರ್ಯ ಕೈಗೊಂಡು ಒಂದು ಪೂರ್ಣರೂಪ ನೀಡಲು ಪ್ರಯತ್ನಿಸಲಾಗಿದೆ.

ನಿಡುಗಲ್ಲು ಪರಿಸರದ ಕೋಟೆಗಳನ್ನು ಅಧ್ಯಯನ ಮಾಡಲು ಪಾವಗಡ ತಾಲ್ಲೂಕಿನಲ್ಲಿ ಬರುವ ಪ್ರಮುಖ ಮೂರು ಮಂಡಲ ಪಂಚಾಯ್ತಿಗಳಾದ ಮಂಗಳವಾಡ, ಚನ್ನಕೇಶವಪುರ, ವೈ.ಎನ್.ಹೊಸಕೋಟೆ ವ್ಯಾಪ್ತಿಯಲ್ಲಿ ಬರುವ ನಿಡಗಲ್ಲು, ದೇವರಬೆಟ್ಟ, ಯಲ್ಲಪ್ಪನಾಯಕನ ಹೊಸಕೋಟೆ, ಬಂಗಾರನಾಯಕನ ಬೆಟ್ಟ, ಕನ್ನಮೇಡಿ ಕೋಟೆಗಳನ್ನು ಪ್ರಸ್ತುತ ಶೀರ್ಷಿಕೆಯಲ್ಲಿ ವಿಶ್ಲೇಷಿಸಲಾಗಿದೆ.

ರಕ್ಷಣೆ ಎಂಬುದು ಅನಾದಿಕಾಲದಿಂದಲೂ ಮನುಷ್ಯನಿಗೆ ಅವಶ್ಯಕವಾಗಿದ್ದರೂ ರಕ್ಷಣಾ ವಾಸ್ತುಶಿಲ್ಪಕ್ಕೆ ಸಂಬಂಧಿಸಿದ ಕೋಟೆಗಳ ನಿರ್ಮಾಣವನ್ನು ರಾಜನು ತನ್ನ ಹಿತಾಸಕ್ತಿಯ ರಕ್ಷಣೆಗಾಗಿ ನಿರ್ಮಿಸಿಕೊಂಡಿದ್ದಾಗಿದೆ. ಕಾಲಕಾಲಕ್ಕೆ ರಕ್ಷಣಾ ವಿಧಾನಗಳಲ್ಲಾದ ಬದಲಾವಣೆಯನ್ನು

ಪ್ರಮುಖವಾಗಿ ಕೋಟೆಗಳಲ್ಲಾದ ಮಾರ್ಪಾಡಿನಿಂದಾಗಿ ತಿಳಿಯಬಹುದಾಗಿದ್ದು, ಕೋಟೆಗೆ ಕೇವಲ ಗೋಡೆಯೊಂದಿದ್ದರೆ ಸಾಕಾಗುವುದಿಲ್ಲ. ಗೋಡೆಯೊಂದಿಗೆ ಕೋಟೆಯ ಅಂಗಭಾಗಗಳಾದ ಕೊತ್ತಲು, ಅಂಬುಗಂಡಿ, ಕಂದಕ, ದ್ವಾರಬಾಗಿಲು, ವಪ್ರ, ಕೋಟೆಯ ತೆನೆ, ಗೋಪುರ, ಅರಮನೆ, ದೇವಾಲಯ, ಮದ್ದಿನಮನೆ, ತುಪ್ಪದ ಕಣಜ, ಉಗ್ರಾಣಗಳು, ಮೊದಲಾದವುಗಳು ಕೋಟೆಗೆ ಅತ್ಯಗತ್ಯ. ಇವು ಇರುವುದರಿಂದ ಒಬ್ಬ ರಾಜನು ಬಲಿಷ್ಟ ಸೈನ್ಯವನ್ನು ಎದುರಿಸಿ ತನ್ನ ರಾಜ್ಯವನ್ನು ರಕ್ಷಿಸಬಹುದು. ಆದಕಾರಣ ಈ ಎಲ್ಲಾ ವಿಷಯಗಳ ಕುರಿತು ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ನಿಡಗಲ್ಲು ಕೋಟೆಯ ಬಗ್ಗೆ ಮಾಹಿತಿ ದೊರೆತರು ರಾಜಕೀಯ ಇತಿಹಾಸ ತಿಳಿಯಲು ಸರಿಯಾದ ಆಧಾರಗಳಿಲ್ಲ. ಆದರೂ ಜನಪದ ಸಾಹಿತ್ಯ ಹಾಗೂ ಐತಿಹ್ಯಗಳ ಸಹಾಯದಿಂದ ಪ್ರಕಟಣೆಗೊಂಡ ಕೆಲವು ಲೇಖನಗಳನ್ನು ಆಧರಿಸಿ ಅಧ್ಯಯನ ಮಾಡಲಾಗಿದೆ. ಕನ್ನಮೇಡಿ ಮತ್ತು ಬಂಗಾರ ನಾಯಕನ ಬೆಟ್ಟ ಕೋಟೆಯ ಬಗ್ಗೆ ರಾಜಕೀಯ ಇತಿಹಾಸ ತಿಳಿಯಲು ಯಾವ ಆಧಾರಗಳು ಸ್ಪಷ್ಟವಾಗಿಲ್ಲ. ಕೋಟೆಯ ಬಗ್ಗೆಯಾದರೂ ಮಾಹಿತಿ ಸಂಗ್ರಹಿಸಲು ಸಂಪೂರ್ಣವಾಗಿ ನಾಶವಾಗಿದೆ. ಯಾವ ಕಟ್ಟಡ ಯಾವುದಕ್ಕೆ ಸಂಬಂಧಿಸಿದ್ದು ಎಂದು ತಿಳಿಯಲಾಗದಷ್ಟು ಹಾಳಾಗಿವೆ. ಆದರೂ ಸಿಗುವ ಐತಿಹ್ಯಗಳನ್ನಾಧರಿಸಿ ಕೋಟೆಯ ಬಗ್ಗೆ ಮಾಹಿತಿಯನ್ನು ಪ್ರಸ್ತುತ ಶೀರ್ಷಿಕೆಯಲ್ಲಿ ಚರ್ಚಿಸಲಾಗಿದೆ.

ನಿಡಗಲ್ಲು ಪರಿಸರದ ಕೋಟೆಗಳನ್ನು ಅಧ್ಯಯನ ಮಾಡಿದಾಗ ಕೋಟೆಯ ನಿರ್ಮಾಣಕ್ಕೆ ಸ್ಥಳೀಯವಾಗಿ ಸಿಗುವಂತಹ ಕಲ್ಲು ಮತ್ತು ಮಣ್ಣನ್ನು ಬಳಸಲಾಗಿದೆ. ಅಲ್ಲದೆ ನಿಡಗಲ್ಲು ಕೋಟೆಯನ್ನು ಹೊರತು ಪಡಿಸಿದರೆ ಬೇರೆ ಕೋಟೆಗಳು ವಾಸ್ತು ಬದ್ಧವಾಗಿ ನಿರ್ಮಾಣವಾಗಿಲ್ಲ ಎಂಬುದನ್ನು ಗುರುತಿಸಬಹುದಾಗಿದೆ. ಏಕೆಂದರೆ ಕೋಟೆಯನ್ನು ನೋಡಿದಾಗ ಕೋಟೆಯ ಗೋಡೆಯ ಬದಲಾಗಿ ಕಲ್ಲು ಬಂಡೆಗಳನ್ನೇ ಗೋಡೆಯನ್ನಾಗಿ ಬಳಸಿಕೊಂಡು ಅನುಕೂಲಕ್ಕೆ ತಕ್ಕ ಹಾಗೆ ಕೋಟೆಯನ್ನು ನಿರ್ಮಿಸಿಕೊಂಡು ಆಳ್ವಿಕೆ ಮಾಡಿರುವುದರಿಂದ ಶತ್ರುಗಳ ದಾಳಿಗೆ ಸಿಕ್ಕಿ ಬಹುಬೇಗ ನಾಶ ಹೊಂದಿರಬಹುದು. ನಿಡಗಲ್ಲು ಕೋಟೆ ಮಾತ್ರ ವಾಸ್ತುಬದ್ಧವಾಗಿ ನಿರ್ಮಾಣವಾಗಿರುವದರಿಂದ ಪ್ರಾರಂಭದಲ್ಲಿ ವಿಜಯನಗರ ಮತ್ತು ಮೊಗಲ್ ಸಾಮ್ರಾಜ್ಯದಂತಹ ಸೈನ್ಯಕ್ಕೆ ಪ್ರಬಲ ವಿರೋಧವನ್ನೊಡ್ಡಿದ್ದವು ಎಂಬುದನ್ನು ಪ್ರಸ್ತುತ ಅಧ್ಯಯನದಿಂದ ತಿಳಿಯಪಡಿಸಲಾಗಿದೆ. ಜೊತೆಗೆ ನೈಸರ್ಗಿಕವಾಗಿ ಬೆಟ್ಟದಲ್ಲಿರುವ ಹೆಬ್ಬಂಡೆಗಳನ್ನೇ ಕೋಟೆಯ ಗೋಡೆಯನ್ನಾಗಿ ಮಾಡಿಕೊಂಡು ಕೆಲವೊಮ್ಮೆ ಶತ್ರುಗಳ ಚಲನವಲನಗಳನ್ನು ವೀಕ್ಷಿಸಲು ಕೊತ್ತಲ ಮತ್ತು ಗೋಪುರಗಳನ್ನಾಗಿ ಬಳಸಿಕೊಂಡಿರುವುದು ಅಧ್ಯಯನದಿಂದ ಕಂಡುಬಂದಿದೆ.

ಪ್ರಸ್ತುತ ಅಧ್ಯಯನದಲ್ಲಿ ನಿಡಗಲ್ಲು ಪರಿಸರದಲ್ಲಿರುವ ನಿಡುಗಲ್ಲು, ದೇವರಬೆಟ್ಟ, ಯಲ್ಲಪ್ಪನಾಯಕನ ಹೊಸಕೋಟೆ, ಬಂಗಾರನಾಯಕನ ಬೆಟ್ಟ, ಕನ್ನಮೇಡಿ ಕೋಟೆಗಳ ರಕ್ಷಣಾ ವಾಸ್ತುಶಿಲ್ಪದ ಬಗ್ಗೆ ಅಧ್ಯಯನ ಮಾಡಲಾಗಿದೆ. ಈ ಪರಿಸರದಲ್ಲಿ ಆಳ್ವಿಕೆ ಮಾಡಿದ ಅರಸರ ಬಗ್ಗೆ ಪರಿಪೂರ್ಣ ದಾಖಲೆಗಳಿಲ್ಲದ ಕಾರಣ ಈ ಕುರಿತು ಇನ್ನೂ ಹೆಚ್ಚಿನ ಸಂಶೋಧನೆ ಕೈಗೊಳ್ಳುವ ಅವಶ್ಯಕತೆಯಿದೆ.

ಪ್ರಸ್ತುತ ಸಂಪ್ರಬಂಧದಲ್ಲಿ ನಿಡಗಲ್ಲು ಪರಿಸರದ ರಕ್ಷಣಾ ವಾಸ್ತುಶಿಲ್ಪದ ಬಗ್ಗೆ ಅಧ್ಯಯನ ಮಾಡುವುದರಿಂದ ಜೊತೆಗೆ ಆ ಪ್ರದೇಶದ ರಾಜಕೀಯ ಇತಿಹಾಸ, ಸಾಮಾಜಿಕ, ಆರ್ಥಿಕತೆ ಮೊದಲಾದ ವಿಷಯಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಮಾಡಲಾಗಿದೆ. ರಾಜ್ಯದ ರಕ್ಷಣೆಯಲ್ಲಿ ಕೋಟೆ ಪ್ರಮುಖ ಪಾತ್ರವಹಿಸುತ್ತದೆ. ಕೋಟೆಯ ನಿರ್ಮಿತಿಯಲ್ಲಿ ಅದರ ಗಾತ್ರ ಮತ್ತು ಅಳವಡಿಸಿಕೊಂಡ ರಕ್ಷಣಾ ವಿಧಾನಗಳಿಂದ ಅದು ಎಷ್ಟು ಸಿರಿ ಸಂಪತ್ತಿನಿಂದ ಕೂಡಿತ್ತು ಎಂಬುದನ್ನು ತಿಳಿಯಬಹುದಾಗಿದೆ. ಹೀಗೆ ರಾಜನು ತನ್ನ ಪರಿವಾರ ಮತ್ತು ತನ್ನ ಸಂಪತ್ತಿನ ಅಥವಾ ರಾಜ್ಯದ ರಕ್ಷಣೆಗಾಗಿ ಕಾಲಕಾಲಕ್ಕೆ ವಿವಿಧ ರೀತಿಯ ರಕ್ಷಣಾ ವಿಧಾನಗಳನ್ನು ಅಳವಡಿಸಿಕೊಂಡು ಕೋಟೆಯನ್ನು ನವೀಕರಿಸುತ್ತಾ ಭದ್ರತೆಗೆ ಹೆಚ್ಚು ಆದ್ಯತೆ ನೀಡುತ್ತಿದ್ದ ಅವರ ತಂತ್ರ ವಿಧಾನದ ಕುರಿತು ಪ್ರಸ್ತುತ ಸಂಪ್ರಬಂಧದಲ್ಲಿ ತಿಳಿಸಲಾಗಿದೆ. ಸೋಜಿಗದ ಸಂಗತಿಯೇನೆಂದರೆ ಒಂದು ಪುಟ್ಟ ಸಂಸ್ಥಾನವಾಗಿದ್ದ ನಿಡುಗಲ್ಲು ಕೋಟೆಯ ಗಾತ್ರವನ್ನು ಗಮನಿಸಿದಾಗ, ಇದಕ್ಕೆ ಆದಾಯದ ಮೂಲ ಏನಾಗಿತ್ತು ಎಂಬುದೇ ಆಶ್ಚರ್ಯವಾಗುತ್ತದೆ. ಏಕೆಂದರೆ ಬಲಿಷ್ಠ ವಿಜಯನಗರ ಮತ್ತು ಮೊಗಲ್ ಸೈನ್ಯಕ್ಕೆ ಒಂದು ಪುಟ್ಟ ಸಂಸ್ಥಾನ ಪ್ರಬಲ ಪೈಪೋಟಿ ನೀಡುವುದು ಸುಲಭದ ವಿಚಾರವಲ್ಲ. ಇದನ್ನು ಗಮನಿಸಿದರೆ ಶಾಸನಗಳಲ್ಲಿ ನಿಡುಗಲ್ಲಿನ ಬಗ್ಗೆ ವರ್ಣಿಸಿರುವುದು ಅತಿಶಯೋಕ್ತಿಯೆನಲ್ಲ. ಆದರೆ ಈ ಪರಿಸರದಲ್ಲಿ ಬರುವ ಇತರೆ ಪಾಳೆಯಪಟ್ಟುಗಳು ಆರ್ಥಿಕವಾಗಿ ಬಲಿಷ್ಠವಾಗಿಲ್ಲದ ಕಾರಣ ಕೋಟೆಗೆ ಯಾವ ಮಾರ್ಪಟುಗಳನ್ನು ಮಾಡದೆ ಶತ್ರುಗಳ ದಾಳಿಗೆ ಬಹುಬೇಗ ವಶವಾಗಿ ಹೇಳ ಹೆಸರಿಲ್ಲದಂತೆ ನಾಶವಾಗಿರಬಹುದೆಂದು ಊಹಿಸಬಹುದಾಗಿದೆ. ಮತ್ತೊಂದು ವಿಷಯವೇನೆಂದರೆ ನಿಡುಗಲ್ಲಿನಂತೆ ಈ ಕೋಟೆಗಳಿಗಿರುವ ಪ್ರದೇಶ ಅಬೇಧ್ಯತೆಯಿಂದ ಕೂಡಿಲ್ಲದಿರುವುದರಿಂದ ಕೆಲವೊಮ್ಮೆ ಕೋಟೆಯನ್ನು ನವೀಕರಿಸಲು ಪ್ರಯತ್ನಿಸದಿರಬಹುದು ಏಕೆಂದರೆ ಟಿಪ್ಪು ನಿಡಗಲ್ಲು ದುರ್ಗದ ಮೇಲೆ ದಾಳಿಮಾಡಿ ಇದರ ನಿರ್ವಹಣೆಗಾಗಿ ಒಬ್ಬ ಅಧಿಕಾರಿಯನ್ನು ನೇಮಿಸಿದನು. ಆದರೆ ನಿಡಗಲ್ಲಿಗೆ ಸಮೀಪದಲ್ಲಿರುವ ದೇವರಬೆಟ್ಟ, ಬಂಗಾರನಾಯಕನ ಬೆಟ್ಟ, ಕನ್ನಮೇಡಿ ಕೋಟೆಯನ್ನು ವಶಪಡಿಸಿಕೊಂಡರೂ ಅಬೇಧ್ಯವಿಲ್ಲದ ಕಾರಣ ನಿರ್ಲಕ್ಷಿಸಿದನು. ಆದ್ದರಿಂದ ಕೋಟೆಯ ನಿರ್ಮಾಣಕ್ಕೂ ಮುನ್ನ ರಕ್ಷಣೆಯ ದೃಷ್ಟಿಯಿಂದ

ಭೌಗೋಳಿಕ ಆಯಕಟ್ಟಿನ ಪ್ರದೇಶವನ್ನು ಆಯ್ಕೆಮಾಡಿಕೊಳ್ಳುವುದು ಅವಶ್ಯಕವಾಗಿರುತ್ತದೆ ಎಂಬುದನ್ನು ಇದರಿಂದ ತಿಳಿಯಬಹುದಾಗಿದೆ.

ಒಟ್ಟಾರೆ ಪ್ರಸ್ತುತ ಸಂಪ್ರಬಂಧದಲ್ಲಿ ರಾಜನು ತನ್ನ ಹಿತಾಸಕ್ತಿ ಮತ್ತು ತನ್ನ ರಾಜ್ಯವನ್ನು ರಕ್ಷಿಸಿಕೊಳ್ಳಲು ತಮ್ಮ ಭೌಗೋಳಿಕ ವ್ಯಾಪ್ತಿಯಲ್ಲಿ ಆರ್ಥಿಕ ಶಕ್ತಿಗನುಸಾರವಾಗಿ ವಿವಿಧ ಪ್ರಕಾರದ ಕೋಟೆಗಳನ್ನು ನಿರ್ಮಿಸಿ ಕಾಲಕಾಲಕ್ಕೆ ಕೋಟೆಯನ್ನು ವಿವಿಧ ರಕ್ಷಣಾ ತಂತ್ರಗಳಿಗನುಸಾರವಾಗಿ ನವೀಕರಿಸುತ್ತಿದ್ದನು ಎಂಬುದನ್ನು ಚರ್ಚಿಸಲಾಗಿದೆ. ನಿಡಗಲ್ಲು ಕೋಟೆಯ ನಿರ್ಮಾಣಕ್ಕೆ ಬಳಸಿರುವ ಕಲ್ಲು ಮಣ್ಣು, ಇಟ್ಟಿಗೆ, ಗಾರೆಯನ್ನು ಗಮನಿಸಿ ಇವರು ಕಾಲಕಾಲಕ್ಕೆ ಕೋಟೆಯನ್ನು ವಿವಿಧ ರಕ್ಷಣಾ ತಂತ್ರಗಳ ಮೂಲಕ ನವೀಕರಿಸುತ್ತಾ ರಕ್ಷಣೆಗೆ ಹೆಚ್ಚು ಆದ್ಯತೆ ನೀಡುತ್ತಿದ್ದರು ಎಂಬುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಪ್ರಸ್ತುತ ವಿಷಯದ ಕುರಿತು ಕ್ಷೇತ್ರಕಾರ್ಯ ಕೈಗೊಂಡಾಗ ಬಹುತೇಕ ಸ್ಮಾರಕಗಳು ನಾಶವಾಗಿರುವುದು ಗಮನಕ್ಕೆ ಬಂದಿತು. ಐತಿಹಾಸಿಕ ಸ್ಮಾರಕದ ಮಹತ್ವವನ್ನು ಅರಿಯಲಾರದ ಜನಸಾಮಾನ್ಯರು ನಿಡುಗಲ್ಲಿನಲ್ಲಿ ಬಹತೇಕ ಸ್ಮಾರಕಗಳನ್ನು ಹಾಳುಗೆಡವಿದ್ದಾರೆ. ನಿಡುಗಲ್ಲಿನ ಜನತೆಯು ಇತ್ತೀಚೆಗೆ ಭವ್ಯಸ್ಮಾರಕಗಳ ರಕ್ಷಣೆಯ ಬಗ್ಗೆ ಹೆಚ್ಚು ಕಾಳಜಿವಹಿಸುತ್ತಿರುವುದು ಒಂದು ಸಮಾಧಾನಕರ ಸಂಗತಿಯಾಗಿದೆ. ದೇವರಬೆಟ್ಟ, ಯಲ್ಲಪ್ಪನಾಯಕನ ಹೊಸಕೋಟೆ, ಬಂಗಾರನಾಯಕನ ಬೆಟ್ಟ, ಕನ್ನಮೇಡಿಗಳಲ್ಲಿ ಕಟ್ಟಡದ ಅವಶೇಷಗಳೇ ಕಾಣಲಾರದಷ್ಟು ಹಾಳಾಗಿವೆ. ಸರ್ಕಾರ ಈ ಪ್ರದೇಶದಲ್ಲಿ ಸ್ಮಾರಕಗಳ ರಕ್ಷಣೆಗೆ ಕಟ್ಟುನಿಟ್ಟಿನ ಕ್ರಮ ಕೈಗೊಂಡರೆ ಗತಕಾಲದ ಇತಿಹಾಸದ ಕುರುಹುಗಳಾದ ಸ್ಮಾರಕಗಳನ್ನು ಮುಂದಿನ ಪೀಳಿಗೆಗೆ ಉಳಿಸಬಹುದಾಗಿದೆ. ಜೊತೆಗೆ ಸರ್ಕಾರಕ್ಕೂ ಆದಾಯ ತರಬಹುದಾದ ಪ್ರವಾಸಿ ಕೇಂದ್ರಗಳನ್ನಾಗಿ ಇವುಗಳನ್ನು ಅಭಿವೃದ್ಧಿಪಡಿಸಿದಾಗ ಸ್ಮಾರಕಗಳ ರಕ್ಷಣೆಯ ಕಾರ್ಯವಾಗುತ್ತದೆ. ಈ ಮೂಲಕ ಜನತೆಯಲ್ಲಿ ಸ್ಮಾರಕಗಳ ಬಗ್ಗೆ ಜಾಗೃತಿಯನ್ನು ಮೂಡಿಸಿ ಅವುಗಳ ಮಹತ್ವವನ್ನು ತಿಳಿಯಪಡಿಸುವ ಮಹತ್ವದ ಜವಾಬ್ದಾರಿ ಇಂದಿನ ಯುವ ಪೀಳಿಗೆಯ ಮೇಲಿದೆ.

## ಗ್ರಂಥಸೂಚಿ


೦೧. ಕವಿತಾಕೃಷ್ಣ (ಸಂ), ೨೦೦೨, ಜಯಮಂಗಲಿ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೦೨. ಕಪನೀಪತಿಭಟ್ಟ ಸಿ.ಎಚ್., ೧೯೬೮, ಶಿಲ್ಪ ಮತ್ತು ನಾಗರೀಕತೆ, ಪ್ರಸಾರಾಂಗ ಮಾನಸ ಗಂಗೋತ್ರಿ, ಮೈಸೂರು.

೦೩. ಕರೋವ್ಕಿನ್ ಕೆ., ಪುರಾತನ ಜಗತ್ತಿನ ಇತಿಹಾಸ, ಪ್ರಗತಿ ಪ್ರಕಾಶನ, ಮಾಸ್ಕೋ, ೧೯೮೭.

೦೪. ಕೃಷ್ಣಭಟ್ ಕೆ. (ಅನು), ೧೯೨೨, ಕೌಟಿಲ್ಯನ ಅರ್ಥಶಾಸ್ತ್ರ, ಸಮಾಜ ಪುಸ್ತಕಾಲಯ, ಧಾರವಾಡ.

೦೫. ಕೃಷ್ಣಶರ್ಮ ಬೇಟಗೇರಿ, ೧೯೮೩, ಕರ್ನಾಟಕ ಜನ ಜೀವನ, ವಿಶ್ವ ಕನ್ನಡ ಸಮ್ಮೇಳನ, ಬೆಂಗಳೂರು.

೦೬. ಕೊಟ್ರೇಶ ಎಂ., ೨೦೦೨, ಕೋಟೆಕೊತ್ತಳಗಳು: ಒಂದು ಅಧ್ಯಯನ (ಬಳ್ಳಾರಿ ಜಿಲ್ಲೆ) (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೭. ಗೋಪಾಲ್ ಆರ್. (ಸಂ), ೨೦೦೯, ತುಮಕೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

೦೮. ಗೋಪಾಲ್ ಬಾ.ರಾ., ೨೦೦೩, ಕರ್ನಾಟಕದ ಕಲೆಗಳು ಸಂಪುಟ–೪, ವಾಸ್ತು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೦೯. ಚನ್ನಬಸಪ್ಪ ಎಸ್. ಪಾಟೀಲ, ೧೯೯೯, ಕರ್ನಾಟಕದ ಕೋಟೆಗಳು ಸಂಪುಟ–೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ಚಿತ್ತಯ್ಯಪೂಜಾರ್, ೨೦೦೦, ನಿಡಗಲ್ಲು ಒಂದು ಸಾಂಸ್ಕೃತಿ ಅಧ್ಯಯನ (ಪಿಎಚ್.ಡಿ ಅಪ್ರಕಟಿತ ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೧. ಚೆಲುವರಾಜನ್ ಆರ್., ೧೯೮೭, ಪಾವಗಡ ತಾಲ್ಲೂಕು ದರ್ಶನ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೧೨. ಜೋಶಿ ಎಸ್.ಕೆ., ೨೦೦೦, ಕರ್ನಾಟಕದ ಪ್ರಾಚೀನ ಕೋಟೆಗಳು ಮತ್ತು ಇತಿಹಾಸ, ಸೂರ್ಯನಾಥ ಕಾಮತ್ ಅಭಿನಂದನಾ ಸಮಿತಿ, ಬೆಂಗಳೂರು.

೧೩. ಪರಮಶಿವಮೂರ್ತಿ ಡಿ.ವಿ., ೧೯೯೯, ಸಂಶೋಧನೆಯ ಸಿರಿ (ಕೆಲವು ಪಾಳೆಗಾರರ ಅಧ್ಯಯನ), ಗುಣನಿಧಿ ಪ್ರಕಾಶನ, ಬೆಂಗಳೂರು.

೧೪. ಪಾಟೀಲ ಯ.ರು., ೨೦೦೦, ಸವದತ್ತಿ ಉಕ್ಕಿನಕೋಟೆ, ದಿನೇಶ ಪ್ರಕಾಶನ, ಬೆಳಗಾವಿ.

೧೫. ಪುಷ್ಪ ತಾ.ಸು., ೧೯೮೫, ನಿಡುಗಲ್ ವೈಭವ ಐತಿಹಾಸಿಕ ಕಾದಂಬರಿ, ಶ್ರೀಗೀತಾ ಪ್ರಕಾಶನ, ಚಿತ್ರದುರ್ಗ.

೧೬. ಬಸವರಾಜು ಡಿ.ಆರ್., ೨೦೦೬, ನಿಡಗಲ್ಲುದುರ್ಗ, ಪ್ರಮೋದ ಪ್ರಕಾಶನ, ಬೆಂಗಳೂರು.

೧೭. ಬಸವರಾಜು ಕೆ.ಆರ್., ೨೦೦೫, ನೊಳಂಬ ಇತಿಹಾಸ ದರ್ಶನ, ನೊಳಂಬ ವೀರಶೈವ ಸಂಘರ್ಷ, ಬೆಂಗಳೂರು.

೧೮. ಬಿರಾದರ ಎಂ.ಜಿ. ಮತ್ತು ಲಕ್ಕೆ ಹಾಗೂ ಸವದತ್ತಿ ಮಠ ಎಸ್.ಡಿ.(ಸಂ), ೧೯೮೭, ಕರಿಬಸವಾರ್ಯ ವಿರಚಿತ ಶ್ರೀಕುಮಾರವಿಜಯವಿಳಾಸಂ, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೧೯. ಭಟ್‌ಸೂರಿ ಕೆ.ಜಿ., ೨೦೦೬, ಶಾಸನ ಅಧ್ಯಯನ ಸಂಪುಟ-೩ ಸಂಚಿಕೆ-೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦. ಬ್ರಹ್ಮಪ್ಪ ಜಿ., ೧೯೯೭, ರತ್ನಾಕರ ವೈಭವ, ರತ್ನತ್ರಯ ಪ್ರಕಾಶನ, ಮೈಸೂರು.

೨೧. ಮಜುಂದಾರ್ ಆರ್.ಸಿ. (ಸಂ), ೧೯೯೯, ಭಾರತೀಯ ಜನತೆಯ ಇತಿಹಾಸ ಮತ್ತು ಸಂಸ್ಕೃತಿ ಸಂಪುಟ-೭, ಕನೂಜ್ ಸಾಮ್ರಾಜ್ಯಯುಗ ಭಾಗ-೧, ಭಾರತೀಯ ವಿದ್ಯಾಭವನ, ಬೆಂಗಳೂರು.

೨೨. ಮಲ್ಲೇಪುರಂ ಜಿ. ವೆಂಕಟೇಶ (ಸಂ), ೧೯೯೯, ಬಸವರಾಜ ಭೂಪಾಲ ಶಿವತತ್ವರತ್ನಾಕರ ಸಂಪುಟ-೧, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೩. ಮುದ್ದುವೀರಪ್ಪ, ೨೦೦೪, ತುಮಕೂರು ಜಿಲ್ಲೆಯ ಕೋಟೆ-ಕೊತ್ತಲಗಳ ಜಾನಪದೀಯ ಅಧ್ಯಯನ (ಪಿಎಚ್.ಡಿ ಅಪ್ರಕಟಿತ ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೪. ತಿಪ್ಪೇಸ್ವಾಮಿ ಎಸ್., ೨೦೦೪, ರಕ್ಷಣಾ ವಾಸ್ತುಶಿಲ್ಪ : ಚಿತ್ರದುರ್ಗ ಜಿಲ್ಲೆ (ಪಿಎಚ್.ಡಿ. ಅಪ್ರಕಟಿತ ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೫. ನಾಗೇಗೌಡ ಎಚ್.ಎಲ್. (ಸಂ), ೨೦೦೬, ಪ್ರವಾಸಿ ಕಂಡ ಇಂಡಿಯಾ ಸಂಪುಟ-೧, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೨೬. ನಂದಿಶ್ವರ್ ಎನ್. ೨೦೦೮, ಸಿರಾತಾಲ್ಲೂಕು ದರ್ಶನ, ಪೂರ್ಣಚಂದ್ರ ತೇಜಸ್ವಿನಿ ಪ್ರಕಾಶನ, ತುಮಕೂರು.

೨೭. ನರಸಿಂಹಶಾಸ್ತ್ರೀ ಕೆ.ಎಲ್., ಶುಕ್ರನೀತಿಸಾರ, ಶ್ರೀಮಜ್ಜಗದ್ಗುರು ಶ್ರೀಕೂಡ್ಲಿ ಶೃಂಗೇರಿ ಮಹಾಸಂಸ್ಥಾನ, ಚಿತ್ರದುರ್ಗ.

೨೮. ಯೋಗೀಶ್ವರಪ್ಪ ಡಿ.ಎನ್., ೨೦೦೨, ೬೯ನೇ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ತುಮಕೂರು.

೨೯. ರಣಗಲಕ್ಷ್ಮೀ ಪಿ.ಎ., ೨೦೦೫, ಪಾವಗಡ ತಾಲ್ಲೂಕಿನ ಜಾನಪದ ವೀರ ನಾಯಕರು, ಸುಮುಖ ಪ್ರಕಾಶನ, ಬೆಂಗಳೂರು.

೩೦. ರಮೇಶನಾಯಕ (ಸಂ), ೨೦೦೭, ಕರ್ನಾಟಕದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರುಚಿಂತನೆ, ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೧. ರಾಜಶೇಖರ ಬಡಿಗೇರ, ೨೦೦೨, ವೀರಗಲ್ಲಿನ ವೀರರು-ಒಂದು ಪುನರಾವಲೋಕನ, ಪ್ರಭಾಸ ಪ್ರಕಟಣೆ, ಅಕ್ಕಲಕೋಟೆ.

೩೨. ರಾಮಚಂದ್ರಪ್ಪ ಹ., ೨೦೦೪, ಪಿನಾಕೇರಿ ಸ್ಮರಣ ಸಂಚಿಕೆ, ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್, ಪಾವಗಡ.

೩೩. ಲಕ್ಷ್ಮಣ ತೆಲಗಾವಿ (ಸಂ), ೨೦೦೬, ಚರಿತ್ರೆ ಅಧ್ಯಯನ ಸಂಪುಟ-೧ ಸಂಚಿಕೆ-೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೪. ಲಕ್ಷ್ಮಣ ತೆಲಗಾವಿ, ೨೦೦೪, ಮೌರ್ಯ ಮತ್ತು ಶಾತವಾಹನ ಯುಗ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೫. ಲಕ್ಷ್ಮಣ ಸಿ.ಎಂ., ೨೦೦೦, ತುಮಕೂರು ಜಿಲ್ಲೆಯ ಭೌಗೋಳಿಕ ಪರಿಸರ ಮತ್ತು ಅಭಿವೃದ್ಧಿ, ದರ್ಶನ ಪ್ರಕಾಶನ, ತುಮಕೂರು.

೩೬. ವಸು ಎಂ.ವಿ. (ಸಂ), ೨೦೦೧, ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೭. ವೆಂಕಟಾಚಲಶಾಸ್ತ್ರೀ(ಸಂ), ೧೯೮೬, ಪ್ರಾಕ್ತನ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೩೮. ಶಾಮಶಾಸ್ತ್ರೀ (ಸಂ), ೧೯೭೧, ಗೋವಿಂದ ವೈದ್ಯನ ಕಂಠಿರವ ನರಸರಾಜ ವಿಜಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೩೯. ಶಿಕಾರಿಪುರ ರಾಮಚಂದ್ರರಾವ್, ೧೯೯೮, ಲೋಥಲ್ ಮತ್ತು ಸಿಂಧೂನಾಗರಿಕತೆ, ಶ್ರೀಹರಿ ಪ್ರಕಾಶನ, ಧಾರವಾಡ.

೪೦. ಶಿವರಾಮ ಕಾರಂತ, ೧೯೭೫, ಭಾರತೀಯಶಿಲ್ಪ, ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ, ಬೆಂಗಳೂರು.

೪೧. ಶಿವತಾರಕ್ ಕೆ.ಬಿ., ೨೦೦೧, ಕರ್ನಾಟಕದ ಪುರಾತತ್ವದ ನೆಲೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೨. ಶಿವಲಿಂಗನಾಯಕ (ಸಂ), ೨೦೦೮, ಜೂನ್ ಮಾಸಿಕ ಪತ್ರಿಕೆ, ಪಾಳೆಯಗಾರರ ಅಸ್ಥಿತ್ವ ತುಮಕೂರು.

೪೩. ಶೀಲಕಾಂತ ಚಿತ್ತರಾ., ೨೦೦೦, ಬಾದಮಿ ಒಂದು ಸಾಂಸ್ಕೃತಿಕ ಅಧ್ಯಯನ (ಪಿಎಚ್.ಡಿ ಅಪ್ರಕಟಿತ ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೪. ಶೇಷಗಿರಿ ಕೆ.ಆರ್ (ಸಂ), ೧೯೮೮, ದೇವಚಂದ್ರ ವಿರಚಿತ ಪೂಜ್ಯವಾದ ಚರಿತೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೪೫. ಶೇಷಶಾಸ್ತ್ರೀ ಆರ್., ೨೦೦೪, ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೪೬. ಶೇಷರತ್ನ (ಅನು), ೨೦೦೯, ಮನುಸ್ಮೃತಿ, ಸಮಾಜಪುಸ್ತಕಾಲಯ, ಧಾರವಾಡ.

೪೭ ಶ್ರೀನಿವಾಸಮೂರ್ತಿ ಹೆಚ್.ವಿ., ಮತ್ತು ರಾಮಕೃಷ್ಣನ್ ಆರ್., ೧೯೯೫, ಸಮಗ್ರ ಕರ್ನಾಟಕ ಚರಿತ್ರೆ, ಓರಿಯಂಟಲ್ ಲಾಂಗಮನ್ ಪ್ರಕಾಶನ, ಬೆಂಗಳೂರು.

೪೮. ಸಚ್ಚಿದಾನಂದ ಶಂಕರಭಾರತೀ ಸ್ವಾಮಿಗಳು, ೨೦೦೫, ಕೌಟಲೀಯ ಅರ್ಥಶಾಸ್ತ್ರ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು.

೪೯. ಸಣ್ಣನಾಗಪ್ಪ, ೨೦೦೭, ನಿಡಗಲ್ಲು ಶೂಲದ ಈರಣ್ಣ ಜನಪದ ಸಂಗ್ರಹ, ಸ್ಫೂರ್ತಿ ಪ್ರಕಾಶನ, ಪಾವಗಡ.

೫೦. ಸತ್ಯಲಿಂಗರಾಜು, ೨೦೦೬, ಪುರಾತತ್ವ ಮಾನವಶಾಸ್ತ್ರ, ಚೇತನ್ ಬುಕ್ ಹೌಸ್, ಮೈಸೂರು.

೫೧. ಸೂರ್ಯನಾಥ ಕಾಮತ್ (ಸಂ), ಸ್ವಾತಂತ್ರ್ಯಸಂಗ್ರಾಮದ ಸ್ಮೃತಿಗಳು ಪ್ರಥಮ ಸಂಪುಟ, ಗೀತಾ ಬುಕ್‌ಹೌಸ್, ಮೈಸೂರು.

೫೨. ಷೇಕ್ ಅಲಿ ಬಿ.ಬಿ., ೧೯೯೭, ಕರ್ನಾಟಕ ಚರಿತ್ರೆ ಸಂಪುಟ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೩. ಜ್ಞಾನನಂದ ಜಿ., ೨೦೦೧, ಶಿಲ್ಪಾದರ್ಶ, ಸಂಪುಟ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಸಂಪುಟಗಳು**

೧. ಇತಿಹಾಸದರ್ಶನ ಸಂಪುಟಗಳು

ಸಂಪುಟ-೬ ಸಂಪುಟ-೭

ಸಂಪುಟ-೯ ಸಂಪುಟ-೧೧

ಸಂಪುಟ-೧೩ ಸಂಪುಟ-೧೪

ಸಂಪುಟ-೧೬ ಸಂಪುಟ-೧೮

ಸಂಪುಟ-೧೯

೦೨. ಎಪಿಗ್ರಾಫಿಯ ಕರ್ನಾಟಕ

ಸಂಪುಟ-೧೧ ಸಂಪುಟ-೧೨ ಸಂಪುಟ-೧೬

೦೩. ಕರ್ನಾಟಕ ಪರಂಪರೆ

ಸಂಪುಟ-೧ ಸಂಪುಟ-೨

೦೪. ಕನ್ನಡ ವಿಷಯ ವಿಶ್ವಕೋಶ ಕರ್ನಾಟಕ ಸಂಪುಟ-೧, ೨೦೦೯, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೦೫. ಕರ್ನಾಟಕ ಗ್ಯಾಸೆಟೀಯರ್ ಭಾಗ ಮೂರು, ಸೂರ್ಯನಾಥ ಕಾಮತ್(ಸಂ), ೧೯೮೬, ಕರ್ನಾಟಕ ಸರ್ಕಾರ

೦೬. ಜನ್ನ ಸಂಪುಟ-ಅನಂತನಾಥ ಪುರಾಣ, ಕೃಷ್ಣಕುಮಾರ್ ಸಿ.ಪಿ., ೨೦೦೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೭. ಪಂಪ ಸಂಪುಟ-ಆದಿಪುರಾಣಂ ಮತ್ತು ವಿಕ್ರಮಾರ್ಜುನ ವಿಜಯಂ, ವೆಂಕಟಚಲಶಾಸ್ತ್ರೀ (ಸಂ), ೨೦೦೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೦೮. ನಾಗಚಂದ್ರ ಸಂಪುಟ-ರಾಮಚಂದ್ರ ಚರಿತ ಪುರಾಣಂ, ಮಲ್ಲಿನಾಥ ಪುರಾಣಂ, ಶಾಂತಿನಾಥ ದಿಬ್ಬದ(ಸಂ), ೨೦೦೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಪತ್ರಿಕೆಗಳು**

೦೧. ಪ್ರಸನ್ನ ಮೂರ್ತಿ ಎಸ್.ಎನ್., ಪ್ರಜಾವಾಣಿ-ಭಾನುವಾರ-೨-ಡಿಸೆಂಬರ್ ೨೦೦೭.

೦೨. Deccan Herald – Sun – Oct – 28- 2007

## ಆಂಗ್ಲ ಸಂಪುಟಗಳು ಮತ್ತು ವರದಿಗಳು

೦೧. American encyclopaedia VoL – VII

೦೨. Annual Report on Indian Epigraphy

೦೩. Archaeology in Karnataka, 1990, Sundara A, Directorate of Archaeology and Museum. Mysore.

೦೪. Annual Reports on South Indian Epigraphy.

೦೫. Epigraphia Indiaca Volumes.

೦೬. Indian Archaeologies – A Review.

೦೭. South Indian Inscriptions Volumes.

೧೧೧

## ಪದಕೋಶ

೦೧. ಅಂತರ್ಗೃಹ – ಮನೆಯ ಒಳಭಾಗ

೦೨. ಅಂಬುಗಂಡಿ – ಕೋಟೆಯ ಕೊತ್ತಲದಲ್ಲಿ ಮರೆಯಾಗಿ ನಿಂತು ಹೊರಗಿರುವ ಶತ್ರುಗಳ ಮೇಲೆ ಬಾಣ ಬಿಡುವುದಕ್ಕಾಗಿ ಇರುವ ಕಿಂಡಿ.

೦೩. ಅಮಾತ್ಯ – ಮಂತ್ರಿ, ಸಚಿವ.

೦೪. ಅರಮನೆ – ರಾಜನ ಮನೆ, ಅರಸನ ನಿವಾಸ ಸ್ಥಾನ.

೦೫. ಆಳ್ವೇರಿ – ಕೋಟೆಯ ಸುತ್ತಣಗೋಡೆ, ಕೋಟೆಯ ಎತ್ತರವಾದ ಗೋಡೆ.

೦೬. ಇಳಿವೋರೆ – ಕೋಟೆಗೋಡೆಯ ರಕ್ಷಣೆಗಾಗಿ ಹಾಕಿರುವ ಮಣ್ಣಿನ ದಿಬ್ಬ, ಇಳಿಜಾರು ಪ್ರದೇಶ.

೦೭. ಉಗ್ರಾಣ – ಧಾನ್ಯ ಮೊದಲಾದ ಸಾಮಾನುಗಳನ್ನು ತುಂಬುವ ಭಾಗ, ದಾಸ್ತಾನು ಕೋಣೆ

೦೮. ಉರ – ಎದೆ; ವಕ್ಷಸ್ಥಳ

೦೯. ಐರಿಣ – ಹಳ್ಳ, ಮುಳ್ಳು, ಕಲ್ಲುಗಳಿಂದ ಕೂಡಿರುವುದು.

೧೦. ಐತಿಹ್ಯ – ಪರಂಪರೆಯಿಂದ ಬಂದಿರುವುದು ; ಚರಿತ್ರೆ.

೧೧. ಔದಕ – ನಡುಗಡ್ಡೆ, ನೀರಿನಿಂದ ಸುತ್ತುವರೆದ ಕಂದಕ.

೧೨. ಕಂದಕ – ಕೋಟೆಯ ಸುತ್ತಲಿರುವ ಅಗಳು, ಆಳವಾದ ತಗ್ಗು, ಕುಣಿ, ಹಳ್ಳ

೧೩. ಕಪ್ಪ – ಸಾಮಂತನಿಂದ ಅಧೀನ ರಾಜನಿಗೆ ಸಲ್ಲುವ ಕಾಣಿಕೆ.

೧೪. ಕಣಜ – ಧಾನ್ಯಗಳನ್ನು ಸಂಗ್ರಹಿಸುವ ಸ್ಥಳ.

೧೫. ಕಾವಲು – ಕಾಪು; ರಕ್ಷಣೆ, ಸೆರೆಮನೆ.

೧೬. ಕಿಂಡಿ – ರಂಧ್ರ, ತೂತು

೧೭. ಕೀರ್ತಿಮುಖ – ದೇವಾಲಯ ಅಥವಾ ಕೋಟೆಯ ದ್ವಾರಗಳಲ್ಲಿರುವ ಸಿಂಹಾಕೃತಿಯ ಶಿಲ್ಪ, ಸಿಂಹ, ಲಲಾಟ.

೧೮. ಕೂರ್ಮ – ಆಮೆ, ವಿಷ್ಣುವಿನ ಹತ್ತು ಅವತಾರಗಳಲ್ಲಿ ಮೂರನೆಯದು, ಒಂದು ಬಗೆಯ ಹಸ್ತ.

೧೯. ಕೋಟೆ – ತುದಿ, ಉಗ್ರಾಣ, ಕೋಣ, ಮೂಲೆ.

೨೦. ಕೊತ್ತಳ – ಕೋಟೆಯ ಪ್ರಾಕಾರದ ಮೇಲೂ, ಗೋಪುರದ ತುದಿಯಲ್ಲಿ ಕಟ್ಟುವ ವರ್ತುಲಾಕಾರದ ಕಟ್ಟಡ.

೨೧. ಕೋಶ ಚೀಲ, – ಯಾವುದಾದರೂ ವಸ್ತುವೊಂದನ್ನು ಮುಚ್ಚಿ ಭದ್ರಪಡಿಸುವ ಖಜಾನೆ, ಬೊಕ್ಕಸ.

೨೨. ಕೋಷ್ಠ – ಮನೆಯ ಒಳಕೊಠಡಿ ಕೋಣೆ, ಕಣಜ, ಪ್ರಾಕಾರದ ಗೋಡೆ, ಸುತ್ತುಗೋಡೆ.

೨೩. ಕೊಳ – ಕಾಲನ್ನು ಬಂಧಿಸುವ ಮರದ ಒಂದು ಉಪಕರಣ, ವರಹಾ, ಹರಿಗೋಲು.

೨೪. ಗಿರಿ – ಪರ್ವತ.

೨೫. ಗರಡಿ – ವ್ಯಾಯಾಮಶಾಲೆ, ಹಳ್ಳಿಯ ದೆವ್ವಕ್ಕಾಗಿ ಕಟ್ಟಿದ ಗುಡಿ.

೨೬. ಗರುಡ – ಹದ್ದಿನ ಜಾತಿಗೆ ಸೇರಿದ ಒಂದು ಪಕ್ಷಿ, ತನ್ನ ಬಾಳನ್ನು ಅರಸನಿಗಾಗಿ ಮುಡುಪಾಗಿಸಿದ ಸ್ವಾಮಿಭಕ್ತ.

೨೭. ಗಹ್ವರ – ಗವಿ, ಗುಹೆ, ಕಾಡು ; ವನ, ಪ್ರವೇಶಿಸಲು ಆಗದ; ಅಗಮ್ಯವಾದ

೨೮. ಗುರಾಣಿ – ಅಡ್ಡಣ ; ಹರಿಗೆ ; ಢಾಲು.

೨೯. ಗುಂಡು – ಗೋಳಾಕಾರ ; ವರ್ತುಲ, ದಪ್ಪಗಿರುವ ಕಲ್ಲು.

೩೦. ಗೋಪುರ – ನಗರದ ಹೆಬ್ಬಾಗಿಲು; ಮಹಾದ್ವಾರ, ನಗರದ ಅಥವಾ ದೇವಸ್ಥಾನಗಳ ಮಹಾದ್ವಾರದ ಮೇಲಿನ ಗುಮ್ಮಟ.

೩೧. ಚಂದ್ರ – ಸಿಂಧೂರ, ಹೊಳೆಯುವ, ಪ್ರಕಾಶಮಾನವಾದ

೩೨. ಜಗತಿ – ವೇದಿಕೆ; ಕಟ್ಟೆ; ಜಗಲಿ.

೩೩. ಚಿಲುಮೆ – ನೀರು ಉಕ್ಕುವ ಸ್ಥಳ.

೩೪. ಟಗರು – ಗಂಡು ಕುರಿ, ಮೇಷ.

೩೫. ಠಾಣ್ಯ – ನೆಲೆ ; ಬೀಡು; ಸೈನ್ಯದ ಶಿಬಿರ.

೩೬. ಪಂಕ – ಕೆಸರು, ರಾಡಿ, ಹೊಲಸು.

| | | | |
|---|---|---|---|
| ೩೭. | ಪಗೋಡ | – | ಹಿಂದೆ ದಕ್ಷಿಣಭಾರತದಲ್ಲಿ ಬಳಕೆಯಲ್ಲಿದ್ದ ಮೂರು ರೂಪಾಯಿಗಳ ಮೌಲ್ಯದ ಒಂದು ನಾಣ್ಯ |
| ೩೮. | ಪರಿಕೆ | – | ಕೋಟೆಯ ಅಗಳು ; ಕಂದಕ. |
| ೩೯. | ಪರಿಖ | – | ಪಟ್ಟದ ಅಥವಾ ಕೋಟೆಯ ಸುತ್ತಲೂ ಅಗೆದಿರುವ ಕಂದಕ ; ಅಗಳು. |
| ೪೦. | ಪರಿಘ | – | ಅಗುಳಿ, ಲಾಳ ವಿಂಡಿಗೆ, ಕಬ್ಬಿಣದ ಆಯುಧ. |
| ೪೧. | ಪದ್ಮ | – | ಕಮಲ, ತಾವರೆ. |
| ೪೨. | ಪಹರೆ | – | ಗಸ್ತು; ಕಾವಲು, ಮೂರು ಘಂಟೆಗಳ ಅವಧಿ, ಜಾವ. |
| ೪೩. | ಪೊಗದಿ | – | ಸಾಮಂತರಾಜರು ಸಾರ್ವಭೌಮರಿಗೆ ಕೊಡುತ್ತಿದ್ದ ಧನರೂಪದ ಕಾಣಿಕೆ, ಕಪ್ಪ. |
| ೪೪. | ಪೊಡವಿ | – | ನೆಲ, ಭೂಮಿ, ಪೃಥ್ವಿ |
| ೪೫. | ಪಾದರಿ | – | ಒಂದು ಜಾತಿಯ ಮರ ಮತ್ತು ಸುವಾಸನೆಯುಳ್ಳ ಅದರ ಹೂವು. |
| ೪೬. | ಪಾಷಾಣ | – | ಕಲ್ಲು, ಶಿಲೆ, ಮಣಿ, ರತ್ನ, ಒಂದು ಬಗೆಯ ವಿಷ. |
| ೪೭. | ಪ್ರಾಕಾರ | – | ಸುತ್ತುಗೋಡೆ, ಅಂಕಣ, ಆವಾರ, ಆವರಣ. |
| ೪೮. | ಫಿರಂಗಿ | – | ದೊಡ್ಡ ತುಬಾಕಿ, ತೋಪು. |
| ೪೯. | ಬತೇರಿ | – | ಕೋಟೆಯ ಮೇಲಿನ ತೋಪುಖಾನೆ. |
| ೫೦. | ಬಿತ್ತರ | – | ವಿಸ್ತಾರ, ಹರವು, ವ್ಯಾಪಿ. |
| ೫೧. | ಬಾಚಿ | – | ಮರವನ್ನು ಕೆತ್ತಲು ಬಡಗಿಗಳು ಬಳಸುವ ಅಗಲವಾದ ಬಾಯಿಯ ಒಂದು ಬಗೆಯ ಕಬ್ಬಿಣದ ಸಾಧನ. |
| ೫೨. | ಬುರುಜು | – | ಕೋಟೆಯ ಪ್ರಾಕಾರದ ಮೇಲೂ ಗೋಪುರದ ತುದಿಯಲ್ಲೂ ಕಟ್ಟುವ ವರ್ತುಲಾಕಾರದ ಕಟ್ಟಡ. |
| ೫೩. | ಭದ್ರಮ | – | ಒಂದೇ ಬಂಡೆಯ ಮೇಲೆ ನೀರಿರುವ ಎತ್ತರವಾದ ಗುಹೆಗಳು. |
| ೫೪. | ಭಿತ್ತಿ | – | ಗೋಡೆ. |

೫೫. ಮಂಟಪ – ಸಮತಲವಾದ ಚಾವಣಿಯುಳ್ಳ ಬಾಗಿಲಿಲ್ಲದ ಚಪ್ಪರದಾಕಾರದ ಕಲ್ಲಿನ ಕಟ್ಟಡ.

೫೬. ಮತ್ಸ್ಯ – ಮೀನು, ವಿಷ್ಣುವಿನ ದಶಾವತಾರಗಳಲ್ಲಿ ಮೊದಲನೆಯದು.

೫೭. ಮದ್ದು – ಸಿಡಿಮದ್ದು, ಅಗ್ನಿಸ್ಫೋಟಕ.

೫೮. ಮಹೀ – ಭೂಮಿ, ಪೃಥ್ವಿ

೫೯. ಮಿಶ್ರ – ಮಿಶ್ರಣ, ವಿವಿಧ ರೀತಿಯ

೬೦. ಮಾನ್ಯ – ಬಹುಮಾನ, ಮಾಂಡಲಿಕ ಸ್ವಾಮಿ

೬೧. ಮುಗಿಲಟ್ಟಣೆ – ಕೋಟೆಗೋಡೆಯ ಮೇಲೆ ಸೈನಿಕರು ಮತ್ತು ಮದ್ದುಗುಂಡುಗಳನ್ನು ಇಡಲು ವಿಶಾಲವಾದ ಉಪ್ಪರಿಗೆ, ಆಕಾಶ, ಗಗನವನ್ನು ಮುಟ್ಟುವಷ್ಟು ಎತ್ತರವಾಗಿರುವ ಬುರುಜು.

೬೨. ಮೊನೆ – ತುದಿ, ಕೊನೆ, ಹರಿತವಾದದು, ಶೌರ್ಯ.

೬೩. ತೆನೆ – ಪ್ರಾಕಾರದ ಅಗ್ರಹಾರದಲ್ಲಿರುವ ಬುಗರಿಯ ಆಕಾರದ ಕಂಡಿಯುಳ್ಳ ರಚನೆ.

೬೪. ತೋಪು – ತುಪಾಕಿ, ಫಿರಂಗಿ.

೬೫. ದಂಡ – ಅಧಿಕಾರದಂಡ, ಶಿಕ್ಷೆ, ಜುಲ್ಮಾನೆ.

೬೬. ದಾರುಮಯ – ಸುತ್ತಲೂ ಶಸ್ತ್ರ ಸಜ್ಜಿತರಾದ ಯೋಧರನ್ನು ನಿಲ್ಲಿಸಿ ತಯಾರಿಸಿರುವ ಕೋಟೆ.

೬೭. ದುರ್ಗ – ಪ್ರವೇಶಿಸಲು ಅವಶ್ಯಕವಾದುದು, ಕೋಟೆ, ಕಾಡು, ಅಡವಿ, ಪಟ್ಟಣ.

೬೮. ದುರ್ಗಮ – ಹೋಗಲು ಅಸಾಧ್ಯವಾದುದು.

೬೯. ದಿಡ್ಡಿ – ಹೆಬ್ಬಾಗಿಲಿನಲ್ಲಿ ಅಥವಾ ಅದರ ಪಕ್ಕದಲ್ಲಿ ಅದು ಮುಚ್ಚಿದಾಗ ತೆರೆದಿರುವ ಸಣ್ಣಬಾಗಿಲು, ಕಿಂಡಿ.

೭೦. ದಿಬ್ಬ – ದಿಣ್ಣೆ, ತಗ್ಗು, ಕುಣಿ, ಹಳ್ಳ.

೭೧. ದೇವಾಲಯ – ಗುಡಿ.

೭೨. ದೋಣಿ – ಬೆಟ್ಟದ ಮೇಲಿರುವ ಸ್ವಾಭಾವಿಕವಾದ ಹೊಂಡ.

೭೩. ದ್ವಾರ – ಬಾಗಿಲು; ಕದ; ಉಪಾಯ; ಯುಕ್ತಿ.

೭೪. ಧನ್ಯ – ಧನಿಕ, ಸಂಪತ್ತು.

೭೫. ಧನು – ಬಿಲ್ಲು; ಧನಸ್ಸು

೭೬. ಧಾನ್ವನ – ಸುತ್ತಲೂ ಐದು ಯೋಜನೆಗಳವರೆಗೆ, ಮರುಭೂಮಿ, ಬಿಲ್ಲು, ಧನಸ್ಸು, ಮರುಭೂಮಿ.

೭೭. ನರ – ಸುತ್ತಲೂ ಸೈನ್ಯ ಬಲವುಳ್ಳದ್ದು.

೭೮. ನಿಡುಗಲ್ಲು – ನಿಡಿದಾದ ಕಲ್ಲು, ದೊಡ್ಡದಾದ ಶಿಲೆ, ಹೆಬ್ಬಂಡೆ.

೭೯. ನಾಗ – ಸರ್ಪ, ಕಶ್ಯಪನ ಪತ್ನಿಯಾದ ಕದ್ರು ಎಂಬುವಳಲ್ಲಿ ಜನಿಸಿದ ಪುರಾಣೋಕ್ತವಾದ ಒಂದು ದೇವಸಂತತಿ.

೮೦. ನಾಭ – ಆಕಾಶ; ಗಗನ; ಮೋಪ; ಮುಗಿಲು.

೮೧. ರಕ್ಷಣೆ – ಕಾಪಾಡುವಿಕೆ

೮೨. ರಥ – ಚತುರಂಗ ಸೇನೆಗಳಲ್ಲಿ ಒಂದು.

೮೩. ರಾಷ್ಟ್ರ – ಒಂದು ಆಡಳಿತದ ವ್ಯಾಪ್ತಿಗೆ ಒಳಪಟ್ಟ ಅನೇಕ ರಾಜ್ಯಗಳ ಸಮುದಾಯ; ದೇಶ; ನಾಡು.

೮೪. ರುಚಿರ – ಕೆಂಪು ಬಣ್ಣದ ಕುದುರೆ, ಸೌಂದರ್ಯ; ಚೆಲುವೆ.

೮೫. ವಪ್ರ – ಸುತ್ತುಗೋಡೆ; ಪ್ರಾಕಾರ, ಬೆಟ್ಟದ ತಪ್ಪಲು, ಇಳಿಜಾರು ಪ್ರದೇಶ.

೮೬. ವರ್ಧಮಾನಮ್ – ಮೃದಂಗದ ಆಕಾರ.

೮೭. ವಾಸ್ತು – ಮನೆ ಮುಂತಾದ ಕಟ್ಟಡಗಳನ್ನು ಕಟ್ಟಲು ಯೋಗ್ಯವಾದ ಜಾಗ.

೮೮. ವೀರಗಲ್ಲು – ಯುದ್ಧದಲ್ಲಿ ಸತ್ತ ವೀರನ ಸ್ಮರಣಾರ್ಥವಾಗಿ ನೆಡುವ ಕಲ್ಲು.

೮೯. ವೃಕ್ಷ – ಮರ, ತರು.

೯೦. ವೃತ್ತಿಕಾಮಯಮ್ – ಮಣ್ಣಿನಿಂದ ಕೂಡಿರುವ ದಿನ್ನೆ.

೯೧. ವೃಶ್ಚಿಕ – ಚೇಳು.

| | | |
|---|---|---|
| ೯೨. ವ್ಯಾಘ್ರ | – | ಮಾಂಸಾಹರಿಯಾದ ಒಂದು ಪ್ರಾಣಿ, ಹುಲಿ. |
| ೯೩. ಶಂಖ | – | ಸೇನಾರಚನೆಯ ಒಂದು ವಿಧ ವ್ಯೂಹಬೇದ, ಸಮುದ್ರದಲ್ಲಿರುವ ಒಂದು ಬಗೆಯ ಜಲಚರ ಜೀವದ ಗೂಡು. |
| ೯೪. ಶಾಲ | – | ಸುತ್ತುಗೋಡೆ; ಆವರಣ; ಮನೆ. |
| ೯೫. ಶಿಲ್ಪ | – | ಕೆತ್ತನೆಯ ಕೆಲಸ; ಕುಶಲವಿದ್ಯೆ; ಕಂಡರಣೆ. |
| ೯೬. ಶೈಲ | – | ಬೆಟ್ಟ, ಪರ್ವತ, ಶಿಲೆಗೆ ಸಂಬಂಧಪಟ್ಟ ಶಿಲೆಯಿಂದ ನಿರ್ಮಿತವಾದ |
| ೯೭. ಸಹಾಯ | – | ಸ್ನೇಹಿತ; ಸಂಗಡಿಗ, ನೆರವು, ಒತ್ತಾಸೆ. |
| ೯೮. ಸಾಸಿರ | – | ಸೂರ್ಯ. |
| ೯೯. ಸಿಂಬಿ | – | ಸುರಳಿ; ಸುತ್ತು; ಸೇವಕಿ; ದಾಸಿ. |
| ೧೦೦. ಸೀಮೆ | – | ಎಲ್ಲೆ, ಗಡಿ, ಮೇರೆ. |
| ೧೦೧. ಸುಜನ | – | ಸಜ್ಜನಿಕೆಯಿಂದ ಕೂಡಿದ, ಒಳ್ಳೆಯ. |
| ೧೦೨. ಸೇಂದಿ | – | ಮದ್ಯ, ಹೆಂಡ. |
| ೧೦೩. ಸ್ಮಾರಕ | – | ಒಂದು ಮಹತ್ವದ ಘಟನೆಯ ಅಥವಾ ವ್ಯಕ್ತಿಯ ಜ್ಞಾಪಕಾರ್ಥವಾಗಿ ಸ್ಥಾಪಿಸಿದ ಕಂಬ, ಕಟ್ಟಡ ಮೊದಲಾದವು. |
| ೧೦೪. ಸ್ವಾಮಿ | – | ಒಡೆಯ, ಯಜಮಾನ, ಅರಸ, ಪ್ರಭು |
| ೧೦೫. ಸೈನ್ಯ | – | ರಾಜನ ಸಪ್ತಾಂಗಗಳಲ್ಲಿ ಒಂದು ಸೇನೆ, ಪಡೆ. |
| ೧೦೬. ಹರವೆ | – | ಒಂದು ಬಗೆಯ ತರಕಾರಿ ಸೊಪ್ಪು. |

# ತುಮಕೂರು ಜಿಲ್ಲೆಯ ನಕ್ಷೆ



# ಪಾವಗಡ ತಾಲ್ಲೂಕಿನ ನಕ್ಷೆ



## ನಿಡುಗಲ್ಲು ಕೋಟೆಯ ತಲ ನಕ್ಷೆ



## ದೇವರ ಬೆಟ್ಟ ಕೋಟೆಯ ತಲನಕ್ಷೆ



# ಯಲ್ಲಪ್ಪ ನಾಯಕನ ಹೊಸಕೋಟೆಯ ತಲ ನಕ್ಷೆ



# ಬಂಗಾರ ನಾಯಕನ ಬೆಟ್ಟದ ಕೋಟೆಯ ತಲ ನಕ್ಷೆ



# ಕನ್ನಮೇಡಿ ಕೋಟೆಯ ತಲ ನಕ್ಷೆ





ಬಿಳಿವರ್ಣದ ನವಶಿಲಾಯುಗದ ಗೀರು ಬಂಡೆ
ಚಿತ್ರಗಳು ಕನ್ನಮೇಡಿ



ಕೆಂಪು ಮತ್ತು ಬಿಳಿ ವರ್ಣದ ನವಶಿಲಾಯುಗದ
ಗೀರು ಬಂಡೆ ಚಿತ್ರಗಳು ಕನ್ನಮೇಡಿ



ಬಿಳಿವರ್ಣದ ಗೀರು ಬಂಡೆ ಚಿತ್ರಗಳು
ಬಂಗಾರ ನಾಯಕನ ಬೆಟ್ಟ



ಬಿಳಿವರ್ಣದ ಗೀರು ಬಂಡೆ ಚಿತ್ರಗಳು
ಬಂಗಾರ ನಾಯಕನ ಬೆಟ್ಟ



ನವಶಿಲಾಯುಗದ ಆಯುಧ ಕನ್ನಮೇಡಿ



ವೀರಭದ್ರನ ಕೋಟೆ ನಿಡುಗಲ್ಲು



ವೀರಭದ್ರನ ಕೋಟೆ ನಿಡುಗಲ್ಲು



ದೇವರ ಬೆಟ್ಟ ದಕ್ಷಿಣನೋಟ



ಗಾಳಿಗೋಪುರ ಮತ್ತು ಐದನೇ ಸುತ್ತಿನ ಕೋಟೆ ದೇವರಬೆಟ್ಟ



ಗುಜ್ಜಾರಪ್ಪನ ಕೋಟೆ ಕನ್ನಮೇಡಿ



ಈಶ್ವರ ದೇವಾಲಯದ ನವರಂಗ ನಿಡುಗಲ್ಲು



ಶ್ರೀರಾಮ ದೇವಾಲಯ ನಿಡುಗಲ್ಲು



ರಂಗನಾಥಸ್ವಾಮಿ ದೇವಾಲಯದ ಶಿಖರಭಾಗ ದೇವರ ಬೆಟ್ಟ



ಬೈರವನ ಶಿಲ್ಪ ನಿಡುಗಲ್ಲು



ಆದಿನಾರಾಯಣ ಮೂರ್ತಿ ನಿಡುಗಲ್ಲು



ಶಾಸನೋಕ್ತ ಮಹಾ ಸತಿಗಲ್ಲು ನಿಡುಗಲ್ಲು



ಮಹಾಸತಿ ಗಲ್ಲುಗಳು ನಿಡುಗಲ್ಲು



ಈಶ್ವರ ದೇವಾಲಯದಲ್ಲಿರುವ ಶಾಸನ ನಿಡುಗಲ್ಲು



ವಜ್ರದಊರಬಾಗಿಲು ನಿಡುಗಲ್ಲು



ಬುರುಜು ನಿಡುಗಲ್ಲು



ಕಲ್ಯಾಣಿ ನಿಡುಗಲ್ಲು



ಕೋಟೆ ತೆನೆ ನಿಡುಗಲ್ಲು

